# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಏಪ್ರಿಲ್ ೯, ೨೦೧೫ (ಚೈತ್ರ ೧೯, ಶಕ ವರ್ಷ ೧೯೩೭)<br>Bengaluru, Thursday, April 9, 2015 (Chaithra 19, Shaka Varsha 1937) | ಸಂಚಿಕೆ ೧೫<br>Issue 15 |
|---|---|---|

## ಭಾಗ ೩
## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಇವರ ನ್ಯಾಯಾಲಯ**

**ಕ್ರಸಂ:ಎ1/ಎಸ್1/ಎಫ್‌ಒಸಿ/ವಿವ-13/2006-07, ಕಾರವಾರ, ದಿನಾಂಕ: 13-02-2015.**

**ಉಪಸ್ಥಿತರು:** ಶ್ರೀ. ಟಿ. ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ
ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

**ಫಿರ್ಯಾದುದಾರರು:** ವಲಯ ಅರಣ್ಯಾಧಿಕಾರಿ,
ಅಂಕೋಲಾ ವಲಯ
ಅಂಕೋಲಾ
(ಸರ್ಕಾರದ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಉ.ಕನ್ನಡ ಕಾರವಾರ)

**ವಿರುದ್ಧ**

**ಅರ್ಜಿದಾರರು:** ಕೃಷ್ಣಾ ರಾಮಾ ಗುನಗಾ
ಪೋಸ್ಟ್: ಅವರ್ಸಾ
ತಾಲೂಕು: ಅಂಕೋಲಾ
ಜಿಲ್ಲೆ: ಉತ್ತರ ಕನ್ನಡ.
(ಅರ್ಜಿದಾರರ ಪರವಾಗಿ ಶ್ರೀ. ಜೆ.ಪಿ. ನಾಯ್ಕ ವಕೀಲರು)

**ಪ್ರಸ್ತಾವನೆ:**

ದಿನಾಂಕ: 24-01-2007 ರಂದು ರಾತ್ರಿ ವೇಳೆಯಲ್ಲಿ ಶಾಖಾ ವನಪಾಲಕ ಹಟ್ಟಿಕೇರಿ, ಅರಣ್ಯ ರಕ್ಷಕ ಹಟ್ಟಿಕೇರಿ ಮತ್ತು ಅರಣ್ಯ ವೀಕ್ಷಕ ಗುಳೇ ಇವರು ಬೈಕ್ ಮೇಲೆ ಅವರ್ಸಾದಲ್ಲಿ ಗಸ್ತು ತಿರುಗುತ್ತಾ ಇರುವಾಗ ರಾತ್ರಿ ಸುಮಾರು 10.00 ಘಂಟೆಗೆ ಯಾರೋ ಇಬ್ಬರು ಅವರ್ಸಾ ಬಜಾರ್ ಕಡೆಯಿಂದ ಭೂದೇವಿ ದೇವಸ್ಥಾನದ ಕಡೆಗೆ ಮೋಟಾರ್ ಬೈಕ್ ಮೇಲೆ ಕಟ್ಟಿಗೆಯನ್ನು ಒಯ್ಯುತ್ತಿರುವದು ರಸ್ತೆ ದೀಪದ ಬೆಳಕಿಗೆ ಕಂಡು ಬಂದಂತೆ ಅವರನ್ನು ಹಿಂಬಾಲಿಸಿ ಬೈಕ್ ತಡೆದು ನಿಲ್ಲಿಸಿ ಸದ್ರಿ ಕಟ್ಟಿಗೆಗೆ ಸಂಬಂಧಪಟ್ಟಂತೆ ಪಾಸು ವ ಫರ್ಮಿಟ್ ಇತ್ಯಾದಿ ಕೇಳಲಾಗಿ ಇಲ್ಲವೆಂದು ಹೇಳಿರುತ್ತಾರೆ. ಹಾಗೂ ಬೈಕ್ ಸವಾರನಿಗೆ ಹೆಸರು ಮತ್ತು ವಿಳಾಸ ಕೇಳಲಾಗಿ ಅವನು ತನ್ನ ಹೆಸರು ಕೃಷ್ಣಾ ರಾಮಾ ಗುನಗಿ ಸಾ: ಹಾರವಾಡಾ ಎಂದು ಹಿಂದೆ ಕುಳಿತವನು ಪುರುಷೋತ್ತಮ ತಿಮ್ಮಾ ಗೌಡ ಸಾ: ಸಕಲಬೇಣ ಎಂದು ಹೇಳಿರುತ್ತಾರೆ. ರಾತ್ರಿ ಸಮಯವಾಗಿರುವದರಿಂದ ಸ್ಥಳದಲ್ಲಿ ಸಾರ್ವಜನಿಕರು ಯಾರು ಇಲ್ಲದೇ ಇದ್ದ ಕಾರಣ ಇಲಾಖಾ ಸಿಬ್ಬಂದಿಗಳಾದ ಶ್ರೀ. ಮಹೇಶ ಶಿವಶರಣಪ್ಪ ಕನಕಟ್ಟಿ, ಅರಣ್ಯ ರಕ್ಷಕ ಹಟ್ಟಿಕೇರಿ ಮತ್ತು ಶ್ರೀ. ಸಾಯಿನಂದ ನಾರಾಯಣ ನಾಯ್ಕ, ಅರಣ್ಯ ವೀಕ್ಷಕ ಗುಳೇ ಇವರನ್ನು ಪಂಚರನ್ನಾಗಿಸಿಕೊಂಡು ಸದ್ರಿ ಕಟ್ಟಿಗೆಯನ್ನು ಪರಿಶೀಲಿಸಲಾಗಿ ಅದು ಸೀಸಂ ಜಾತಿಯ ಕೈ ಚಿರಾವು ನಗಗಳಾಗಿದ್ದು ಅವುಗಳ ಒಟ್ಟೂ ಅಳತೆ 2=0.02 ಘ.ಮೀ. ಆಗಿರುತ್ತದೆ. ಮತ್ತು ಮೋಟಾರ್ ಬೈಕ್‌ನ್ನು ಪರಿಶೀಲಿಸಲಾಗಿ ಅದು ಹಿರೋಹೊಂಡಾ ಸ್ಪ್ಲೆಂಡರ್ ಬೈಕ್ ಅದರ ನೋಂದಣಿ ಸಂಖ್ಯೆ: ಕೆಎ-30/ಕೆ-7852 ಆಗಿದ್ದು ಖಾತ್ರಿ ಮಾಡಿಕೊಂಡು ಸದರ ಸೀಸಂ ಕೈ ಚಿರಾವು ನಗಗಳು 2=0.112 ಘ.ಮೀ. ಮುದ್ದೆ ಮ್ಹಾಲು ಇದನ್ನು ಅನಧಿಕೃತವಾಗಿ ಸಾಗಿಸುತ್ತಿರುವ ಬಗ್ಗೆ ದೃಢಪಟ್ಟಿಕೊಂಡು ಶಾಖಾ ವನಪಾಲಕ, ಹಟ್ಟಿಕೇರಿ ಇವರು ಪಂಚರ ಸಮಕ್ಷಮ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 62, 81ಎ, 80 ಮತ್ತು 104ಎ ಪ್ರಕಾರ ಪ್ರಥಮ ಮಾಹಿತಿ ವರದಿ ಸಂಖ್ಯೆ: 21/2006-07ರ ಪ್ರಕಾರ ಅರಣ್ಯ ಮೊಕದ್ದಮೆ ದಾಖಲಿಸಿಕೊಂಡು ನಂತರ ಪಂಚನಾಮೆಯನ್ನು ರಸ್ತೆಯ ದೀಪದ ಸಹಾಯದಿಂದ ರಾತ್ರಿ 10.00 ಘಂಟೆಯಿಂದ ಪ್ರಾರಂಭಿಸಿ ರಾತ್ರಿ 11.30 ಘಂಟೆಯವರೆಗೆ ಬರೆದು ಮುಗಿಸಿದ್ದು ಇರುತ್ತದೆ. ನಂತರ ಗುನ್ಹೆಗೆ ಬಳಸಿದ ವಾಹನ ಹಾಗೂ ಜಪ್ತ ಕಟ್ಟಿಗೆಯನ್ನು ವಲಯ ಅರಣ್ಯಾಧಿಕಾರಿ, ಅಂಕೋಲಾ ಇವರ ಸಮಕ್ಷಮ ಹಾಜರುಪಡಿಸಿದ್ದು ಇರುತ್ತದೆ. ವಲಯ

ಅರಣ್ಯಾಧಿಕಾರಿ, ಅಂಕೋಲಾ ಇವರ ವರದಿ ದಿನಾಂಕ: 27-01-2007 ರಂದು ಜಪ್ತ ವಾಹನ ಮತ್ತು ಕಟ್ಟಿಗೆಯನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿದ್ದು ಇರುತ್ತದೆ. ಸದರ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಈ ಪ್ರಾಧಿಕಾರದ ಆದೇಶ ದಿನಾಂಕ 27-01-2007 ರಂದು ಸದರ ಜಪ್ತಪಡಿಸಿದ ಹಿರೋಹೊಂಡಾ ಮೋಟಾರ್ ಬೈಕ್ ವಾಹನ ಸಂಖ್ಯೆ: ಕೆಎ-30/ಕೆ-7852 ಮತ್ತು ಸೀಸಂ ತುಂಡುಗಳು 2=0.012 ಘ.ಮೀ.ನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಕಾರವಾರ ಇವರ ತಾಬಾದಲ್ಲಿ ವಹಿಸಿಕೊಡಲಾಯಿತು.

ಸದರ ಜಪ್ತ ವಾಹನದ ಮಾಲೀಕತ್ವದ ಕುರಿತು ಈ ನ್ಯಾಯಾಲಯದಿಂದ ದಿನಾಂಕ: 07-03-2007 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾರವಾರ ಇವರಿಗೆ ಪತ್ರ ಬರೆಯಲಾಗಿ ಅವರಿಂದ ದಿನಾಂಕ: 03-04-2008 ರಂದು ವಾಹನದ ಮಾಲೀಕತ್ವದ ಬಗ್ಗೆ B Sheet Report ವರದಿ ನೀಡಿ ಸದರ ದ್ವಿಚಕ್ರ ವಾಹನವು ಶ್ರೀ. ಕೃಷ್ಣಾ ಸನ್ ಆಫ್ ತಂದೆ ರಾಮಾ ಗುನಗಾ ಸಾ: ಅವರ್ಸಾ ಅಂಕೋಲಾ ಇವರು ಮಾಲೀಕತ್ವದ್ದು ಇರುವ ಬಗ್ಗೆ ತಿಳಿಸಿದ್ದು ಇರುತ್ತದೆ.

ಈ ಪ್ರಕರಣದ ವಿಚಾರಣೆಗಾಗಿ ವಾಹನ ಮಾಲೀಕರಿಗೆ ಈ ನ್ಯಾಯಾಲಯದಿಂದ ದಿನಾಂಕ: 22-07-2008, 21-06-2012, 04-07-2012, 25-07-2012, 28-08-2012, 11-09-2012, 08-11-2013, 21-11-2013, 20-12-2013, 03-01-2014, 17-01-2014, 31-01-2014, 28-02-2014, 23-05-2014, 04-07-2014, 01-08-2014, 22-08-2014, 05-09-2014, 31-10-2014, 21-11-2014, 12-12-2014, 23-01-2015 ರಂದು ಹಾಜರಾಗಲು ಮತ್ತು ಅವರ ಪರ ವಕಾಲತ್ ವಹಿಸಿದ ನ್ಯಾಯವಾದಿಗಳಿಗೂ ನೋಟೀಸು ಜಾರಿ ಮಾಡಿದ್ದು ಇರುತ್ತದೆ.

1. ಜಫ್ತುಪಡಿಸಿದ ವಾಹನದ ಬಗ್ಗೆ ಮುಂದಿನ ಆದೇಶಕ್ಕಾಗಿ ಪ್ರಕರಣವನ್ನು ವಿಚಾರಣೆಗಾಗಿ ಕೈಗೆತ್ತಿಕೊಳ್ಳಲಾಯಿತು. ಅರ್ಜಿದಾರರು ಹಾಗೂ ಪರ ವಕೀಲರು ಸಾಕ್ಷಿ ವಿಚಾರಣೆ ಕಾಲಕ್ಕೆ ಹಾಜರಾಗಿದ್ದು ಹಾಗೂ ಎದುರುದಾರರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ವಿಚಾರಣೆಗೆ ಹಾಜರು ಆಗಿರುತ್ತಾರೆ. ಫಿರ್ಯಾದುದಾರ/ಎದುರುದಾರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಪಿಡಬ್ಲು-1 ರಿಂದ ಪಿಡಬ್ಲು-2 ರವರನ್ನು ವಿಚಾರಿಸಿರುತ್ತಾರೆ.

   ಪಿಡಬ್ಲು-1: ಶ್ರೀ. ಗಣಪತಿ ವಿಠ್ಠಲ ನಾಯ್ಕ, ವಲಯ ಅರಣ್ಯಾಧಿಕಾರಿ ಭಟ್ಕಳ

   ಪಿಡಬ್ಲು-2: ಶ್ರೀ. ಸಾಯಿನಂದ ನಾರಾಯಣ ನಾಯ್ಕ, ಅರಣ್ಯರಕ್ಷಕರು, ಕೋಟೆಬಾವಿ

   ಪಿಡಬ್ಲು-3: ಶ್ರೀ. ವಿನಾಯಕ ಪ್ರಕಾಶ ನಾಯ್ಕ ವಲಯ ಅರಣ್ಯಾಧಿಕಾರಿ, ಸಾ.ಅ. ಸಿದ್ದಾಪುರ

   ಪಡಬ್ಲು-4: ಶ್ರೀ. ದೀಪಕ್ ಆನಂದು ನಾಯ್ಕ, ವಲಯ ಅರಣ್ಯಾಧಿಕಾರಿ, ತಟ್ಟಿಹಳ್ಳ ಅರಣ್ಯ ತರಬೇತಿ ಕೇಂದ್ರ, ಹಳಿಯಾಳ.

   ನಿಶಾನೆ ಪಿ-1 ರಿಂದ ಪಿ-4 ನ್ನು ಹಾಜರುಪಡಿಸಿರುತ್ತಾರೆ.

   ನಿಶಾನೆ ಪಿ-1 : ಪಂಚನಾಮೆ

   ನಿಶಾನೆ ಪಿ-2 : ಪ್ರಥಮ ಮಾಹಿತಿ ವರದಿ

   ನಿಶಾನೆ ಪಿ-3: ಸೀಜರ್ ರಿಪೋರ್ಟ

   ನಿಶಾನೆ ಪಿ-4: ವಿಚಾರಣಾ ವರದಿ

   ಮುದ್ದೆಮ್ಹಾಲು (1)-ಕೆಎ-30/ಕೆ-7852 ಹಿರೋಹೊಂಡಾ ಬೈಕ್.

2. ಹಾಜರುಪಡಿಸಿದ ಎಲ್ಲಾ ಲಿಖಿತ ದಾಖಲೆಗಳು ಮತ್ತು ಹೇಳಿಕೆಗಳನ್ನು ಆಲಿಸಿ, ಪರಿಶೀಲಿಸಿದ ನಂತರ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ.

   ಅ) ಈ ಪ್ರಕರಣದಲ್ಲಿ ಸರ್ಕಾರಿ ಸ್ವತ್ತುಗಳಾದ ಸೀಸಂ ಕೈ ಚಿರಾವು ನಗಗಳು 2=0.112 ಘ.ಮೀ ಅಧಿಕೃತ ಪಾಸ್ ಯಾ ಫರ್ಮಿಟ್ ಇಲ್ಲದೆ ಸಾಗಿಸುತ್ತಿದ್ದ ಬಗ್ಗೆ ಗುನ್ಹೆ ದಾಖಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

   ಆ) ಈ ಮೇಲೆ ನಮೂದಿಸಿದ ಸೀಸಂ ಕೈ ಚಿರಾವು ನಗಗಳು 2=0.112 ಘ.ಮೀ. ಕಳ್ಳ ಸಾಗಾಣಿಕೆ ಮಾಡುವಲ್ಲಿ ಹಿರೋಹೊಂಡಾ ಸ್ಪ್ಲೆಂಡರ್ ಬೈಕ್ ನೋಂದಣಿ ಸಂಖ್ಯೆ: ಕೆಎ-30/ಕೆ-7852 ಉಪಯೋಗ ಮಾಡಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

   ಇ) ಈ ಗುನ್ಹೆಯನ್ನು ವಾಹನದ ಮಾಲೀಕ/ಅಪಾದಿತನು/ಅರ್ಜಿದಾರನು ವಾಹನದ ಜವಾಬ್ದಾರಿ ಹೊಂದಿದ ವ್ಯಕ್ತಿಯಾಗಿ ಗೊತ್ತಿದ್ದು ಮಾಡಿದ್ದಾರೆಯೇ? ಹಾಗೂ ಅವರು ಈ ಗುನ್ಹೆಯಲ್ಲಿ ಶಾಮೀಲಾಗಿದ್ದಾರೆಯೇ?

   ಈ) ಈ ವಾಹನವನ್ನು ಅರಣ್ಯ ಕಾಯಿದೆ 71ಎ ನಿಯಮದಡಿ ಮುಟ್ಟುಗೋಲು ಹಾಕಿಕೊಳ್ಳಬಹುದೇ?

   **ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.**

   ಅಂಶ ನಂ. (ಅ) -- ಹೌದು

   ಅಂಶ ನಂ. (ಆ) -- ಹೌದು

   ಅಂಶ ನಂ. (ಇ) -- ಹೌದು

   ಅಂಶ ನಂ. (ಈ) -- ಹೌದು

   ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ವಿವರಿಸುತ್ತೇನೆ.

**ವಿಚಾರಣೆ ಕಾಲಕ್ಕೆ ನೀಡಲಾದ ಹೇಳಿಕೆಗಳು:**

**ಅಂಶ ನಂ (ಅ):**

**ಪಿ.ಡಬ್ಲು–1** ಶ್ರೀ. ಗಣಪತಿ ವಿಠ್ಠಲ ನಾಯ್ಕ ರವರು ತಮ್ಮ ಸಾಕ್ಷ್ಯದಲ್ಲಿ ದಿನಾಂಕ: 24-01-2007 ರಂದು ಅವರ್ಸಾ ಗ್ರಾಮದಲ್ಲಿ ನಾನು ಹಾಗೂ ಮಹೇಶ ಕನಕಟ್ಟಿ, ಅರಣ್ಯ ರಕ್ಷಕ ಹಾಗೂ ಸಾಯಿನಂಧ ನಾಯಕ್, ಅರಣ್ಯ ವೀಕ್ಷಕ ಇವರೊಂದಿಗೆ ನನ್ನ ಸ್ವಂತ ಬೈಕ್‌ನಲ್ಲಿ ಅಜಮಾಸು ರಾತ್ರಿ 10 ಗಂಟೆ ಸುಮಾರಿಗೆ ಗಸ್ತು ತಿರುಗುತ್ತಿದ್ದಾಗ 2 ಜನ ವ್ಯಕ್ತಿಗಳು ಮೋಟಾರ್ ಬೈಕಿನ ಮೇಲೆ ಕಟ್ಟಿಗೆ ತುಂಡುಗಳನ್ನು ಒಯ್ಯುತ್ತಿರುವಾಗ ಅವರ್ಸಾದಿಂದ ಭೂದೇವಿ ದೇವಸ್ಥಾನದ ಹತ್ತಿರ ತಡೆದು ವಾಹನವನ್ನು ಪರಿಶೀಲಿಸಿದಾಗ ಹಿಂದುಗಡೆ ಕುಳಿತ ಒಬ್ಬ ವ್ಯಕ್ತಿ ಸೀಸಂ ಕಟ್ಟಿಗೆ ತುಂಡು ಹಿಡಿದುಕೊಂಡು ಇದ್ದು ಒಬ್ಬ ಬೈಕ್ ಹೊಡೆಯುತ್ತಿದ್ದ ಪರಿಶೀಲನೆ ಮಾಡಿದಾಗ 2 ಸೀಸಂ ಚಿರಾವು ತುಂಡುಗಳು ಇದ್ದದ್ದು ಕಂಡು ಬಂದವು. ಈ ಬಗ್ಗೆ ತುಂಡುಗಳನ್ನು ಪರಿಶೀಲಿಸಿದಾಗ ಅದಕ್ಕೆ ಇಲಾಖಾ ಫರ್ಮಿಟ್, ಛಪ್ಪಾ ಅಥವಾ ಪಾಸು ಅಥವಾ ರಹದಾರಿ ಯಾವುದೂ ಇರಲಿಲ್ಲ. ಅವರ ಹೆಸರನ್ನು ಕೇಳಲಾಗಿ, ಬೈಕ್ ಹೊಡೆಯುತ್ತಿದ್ದವನ ಹೆಸರು ಕೃಷ್ಣಾ ರಾಮಾ ಗೌಡ ಯಾನೆ ಗುನಗಾ ಸಾ: ಹಾರವಾಡಾ ಹಾಗೂ ಹಿಂದೆ ಕುಳಿತವನ ಹೆಸರು ಕೇಳಲಾಗಿ ಅವನ ಹೆಸರು ಪುರಷೋತ್ತಮ ತಿಮ್ಮಾ ಗೌಡ ಸಾ: ಸಕಲಬೇಣ ಎಂದು ಹೇಳಿದರು. ತದನಂತರ ಸ್ಥಳದಲ್ಲಿ ಪಂಚನಾಮೆಯನ್ನು ನನ್ನ ಸಮಕ್ಷಮ ನಂತರ ಸ್ಥಳಕ್ಕೆ ಬಂದ ಶ್ರೀ. ವಿ.ಪಿ. ನಾಯ್ಕ, ಶಾಖಾ ವನಪಾಲಕ, ಅಂಕೋಲಾ ಇವರು ಬರೆದರು. ಸ್ಥಳದಲ್ಲಿ ಬರೆದ ಪಂಚನಾಮೆಯನ್ನು ನಾನು ಈಗ ಗುರುತು ಹಿಡಿಯುತ್ತೇನೆ. ಅಲ್ಲದೇ ನಾನು ಗುನ್ನೆಯಲ್ಲಿ ಬಳಸಿದ ಬೈಕ್ ಮತ್ತು ಚಿರಾವು ಸೀಸಂ ತುಂಡುಗಳನ್ನು ನಾನು ಈಗ ಗುರುತಿಸುತ್ತಿದ್ದೇನೆ. ನಂತರ ಆರೋಪಿತರು ಹಾಗೂ ಜಪ್ತಪಡಿಸಿದ ಮುದ್ದೆ ಮ್ಹಾಲಿನೊಂದಿಗೆ ವಲಯ ಅರಣ್ಯಾಧಿಕಾರಿ, ಅಂಕೋಲಾ ಇವರಲ್ಲಿ ಸಮಕ್ಷಮ ಹಾಜರುಪಡಿಸಿರುತ್ತೇನೆ. ಸರ್ಕಾರದ ಪರವಾಗಿ ನಾನು ವರದಿಯನ್ನು ಸಲ್ಲಿಸಿ ಪ್ರಥಮ ವರ್ತಮಾನ ವರದಿಯನ್ನು ದಾಖಲುಪಡಿಸಿದ್ದೇನೆ. ಸಾಕ್ಷಿಯನ್ನು ನೋಡಿ ಗುರುತಿಸಿದ ಪ್ರವಾ ವರದಿಯನ್ನು ನಿಶಾನೆ 2 ಮತ್ತು ಸಾಕ್ಷಿ ಸಹಿಯನ್ನು ನಿಶಾನೆ 2ಎ ಎಂದು ಗುರುತಿಸಲಾಯಿತು. ನಾನು ಜಪ್ತಪಡಿಸಿದ ಮುದ್ದೆಮ್ಹಾಲಿನ ಬಗ್ಗೆ ಫಾರ್ಮ ನಂ. 20ರಲ್ಲಿ ವರದಿಯನ್ನು ಸಲ್ಲಿಸಿದ್ದು ಅದನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿ.ಪಿ–3 ಎಂದು ಸಾಕ್ಷಿಯ ಸಹಿಯನ್ನು ನಿ.ಪಿ–3ಎ ಎಂದು ಗುರುತಿಸಲಾಯಿತು. ನಿಶಾನೆ ಪಿ–1 ಪಂಚನಾಮೆ ಬರೆಯುವ ಕಾಲಕ್ಕೆ ರಾತ್ರಿ 10 ಗಂಟೆಯಾಗಿದ್ದರಿಂದ ಆಗ ಅಲ್ಲಿ ಯಾವುದೇ ಜನ ಸಂಚಾರ ಇರಲಿಲ್ಲ ಕಾರಣ, ನಮ್ಮ ಸಿಬ್ಬಂದಿಯವರನ್ನೇ ಪಂಚರನ್ನಾಗಿ ಮಾಡಿಕೊಂಡಿದ್ದೇನೆ. ನಂತರ ತನಿಖೆಯನ್ನು ಮುಂದುವರಿಸಿ ತನಿಖಾ ವರದಿಯನ್ನು ತಯಾರಿಸಿ, ವಲಯ ಅರಣ್ಯಾಧಿಕಾರಿಗಳಿಗೆ ಸಲ್ಲಿಸಿದ್ದೇನೆ. ತನಿಖಾ ವರದಿಯನ್ನು ನಿ.ಪಿ–4 ಸಾಕ್ಷಿ ಸಹಿಯನ್ನು ನಿಪಿ–4ಎ ಎಂದು ಗುರುತಿಸಲಾಯಿತು. ತನಿಖೆಯ ಕಾಲಕ್ಕೆ ಅರ್ಜಿದಾರರಾದ ಕೃಷ್ಣಾ ರಾಮಾ ಗುನಗಾ ಇವರು ಹೀರೋ ಹೊಂಡಾ ಮೋಟರ್ ಬೈಕ ನಂ. ಕೆಎ–30/ಕೆ–7852ರ ಬಗ್ಗೆ ಯಾವುದೇ ದಾಖಲಾತಿಗಳನ್ನು ನಮಗೆ ನೀಡಿದ್ದು ಇರುವುದಿಲ್ಲ. ಈ ಪ್ರಕರಣದ ತನಿಖೆಯನ್ನು ಕೈಕೊಂಡು ವಲಯ ಅರಣ್ಯಾಧಿಕಾರಿಗಳು ಆರೋಪಿತರ ವಿರುದ್ಧ ಅಂಕೋಲಾ ನ್ಯಾಯಾಲಯದಲ್ಲಿ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿರುತ್ತಾರೆ. ಗುನ್ನೆಯಲ್ಲಿ ಬಳಸಲಾದ ಮೋಟರ್ ಬೈಕನ್ನು ನಾನು ಈಗ ನೋಡುತ್ತಿದ್ದೇನೆ ಅದನ್ನು ಎಂ.ಓ–1 ಎಂದು ಗುರುತಿಸಲಾಯಿತು. ಕಾರಣ, ಜಪ್ತಪಡಿಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ಪ್ರಾರ್ಥಿಸುತ್ತೇನೆ ಎಂತಾ ಹೇಳಿರುತ್ತಾರೆ.

**ಪಾಟೀ ಸವಾಲು:**

ಸಾಕ್ಷಿಯನ್ನು ಪುನ: ಕರೆಯಿಸಿ ಪ್ರಮಾಣ ವಚನ ಬೋದಿಸಲಾಯಿತು. ಪಾಟೀ ಸವಾಲು ಶ್ರೀ. ಜೆ.ಪಿ. ನಾಯ್ಕ ವಕೀಲರಿಂದ ಅರ್ಜಿದಾರರ ಪರ

ನಾನು ಈ ಪ್ರಕರಣದ ಪ್ರಾಥಮಿಕ ತನಿಖೆಯನ್ನು ಮಾಡಿರುತ್ತೇನೆ. ಉಳಿದ ತನಿಖೆಯನ್ನು ವಲಯ ಅರಣ್ಯಾಧಿಕಾರಿಗಳು ಮಾಡಿರುತ್ತಾರೆ. ನಾವು ದಿನದ 24 ಗಂಟೆಯೂ ಕರ್ತವ್ಯದಲ್ಲಿರುತ್ತಿದ್ದು ಯಾವುದಾದರೂ ಮಾಹಿತಿ ಇದ್ದಲ್ಲಿ ಕೂಡಲೇ ಸ್ಥಳಕ್ಕೆ ಹೋಗುತ್ತೇವೆ. ನಾವು ನಮ್ಮ ಕಚೇರಿಯ ದಿನಚರಿಯಲ್ಲಿ ಒಟ್ಟೂ ದೈನಂದಿನ ಕರ್ತವ್ಯದ ಬಗ್ಗೆ ಮಾಹಿತಿಯನ್ನು ಬರೆಯುತ್ತೇವೆ. ಘಟನೆ ನಡೆದ ದಿನದ ದಿನಚರಿಯನ್ನು ಮಾನ್ಯ ನ್ಯಾಯಾಲಯಕ್ಕೆ ಹಾಜರುಪಡಿಸಲು ನನಗೆ ಯಾವುದೇ ತೊಂದರೆ ಇರುವದಿಲ್ಲ. ಘಟನೆ ನಡೆದ ಎಂದು ಹೇಳುವ ದಿನ ನನ್ನ ಸಂಗಡ ಅರಣ್ಯ ರಕ್ಷಕರಾದ ಸಾಯಿನಂದ ನಾಯ್ಕ ಮತ್ತು ಮಹೇಶ ಕನಕಟ್ಟಿ ಇದ್ದರು ನಂತರದಲ್ಲಿ ದೀಪಕ ನಾಯ್ಕ ಮತ್ತು ವಿನಾಯಕ ನಾಯ್ಕ ಎನ್ನುವ ವನಪಾಲಕರು ಸ್ಥಳಕ್ಕೆ ಬಂದಿರುತ್ತಾರೆ. ಕೃಷ್ಣ ರಾಮಾ ಗೌಡ ಇತನಿಗೆ ಸಕಲಬೇಣ ಹಾಗೂ ಹಾರವಾಡಾದಲ್ಲಿ ಜಮೀನಿ ಇದ್ದ ಬಗ್ಗೆ ನನಗೆ ಯಾವುದೇ ಮಾಹಿತಿ ಇರುವದಿಲ್ಲ. ಆದರೆ ಸಕಲಬೇಣದಲ್ಲಿ ಕೆಲಸ ಮಾಡುವದನ್ನು ಹಾರವಾಡಾದಲ್ಲಿ ಓಡಾಡುವದನ್ನು ನಾನು ನೋಡಿದ್ದೇನೆ. ನಾವು ನಮ್ಮ ಮೇಲಾಧಿಕಾರಿಗಳು ಹೇಳಿದಂತೆ ಕೆಲಸ ಮಾಡುತ್ತೇವೆ ಎಂದರೆ ಸರಿಯಲ್ಲ ಆದರೆ ಅವರು ಮಾಡಿದ ಆದೇಶವನ್ನು ನಾವು ಪಾಲಿಸುತ್ತೇವೆ. ನನ್ನ ವ್ಯಾಪ್ತಿಯಲ್ಲಿ ಬರುವ ಅರಣ್ಯ ಪ್ರದೇಶಗಳಿಗೆ ಯಾವಾಗಲೂ ಭೇಟಿ ನೀಡುತ್ತಾ ಇರುತ್ತೇನೆ. ಅರ್ಜಿದಾರರು ತಮ್ಮ ಸ್ವಂತ ಮಾಲ್ಕಿ ಜಮೀನಿನಲ್ಲಿ ಕೆಲಸ ಮಾಡುತ್ತಿದ್ದಾಗ ನಾನು ಅವರಿಗೆ ತೊಂದರೆ ಕೊಡುತ್ತಿದೆ ಎಂದರೆ ಸರಿಯುಲ್ಲ. ಆ ಕಾರಣಕ್ಕಾಗಿ ನಾನು ಅವರ ಮೇಲೆ ಸುಳ್ಳು ಫಿರ್ಯಾದಿ ಮಾಡುತ್ತಿದೆನೆಂದರೆ ಅದು ಸರಿಯಲ್ಲ. ಅರ್ಜಿದಾರರು ಹಿರೋ ಹೊಂಡಾ ಸ್ಪೆಲಂಡರ್ ಮೋಟಾರ್ ಬೈಕ್ನಲ್ಲಿ ಯಾವುದೇ ಸೀಸಂ ತುಂಡುಗಳನ್ನು ಅನಧಿಕೃತವಾಗಿ ಸಾಗಿಸುತ್ತಿದ್ದೇನೆಂದರೆ ಸರಿಯಲ್ಲ. ಹಾಗೂ ಈ ಬಗ್ಗೆ ನಾನು ಸದರಿ ಮೋಟಾರು ಬೈಕನ್ನು ಅರ್ಜಿದಾರರಿಂದ ಜಪ್ತಿಪಡಿಸಿಕೊಳ್ಳುತ್ತಿದೆನೆಂದರೆ ಸರಿಯಲ್ಲ. ನಮ್ಮ ಇಲಾಖೆಯಲ್ಲಿ ವಾರಸುದಾರರಿಲ್ಲದ ಸೀಸಂ ನಗಗಳು ಇರುತಿದ್ದು ಅದರ ಬಗ್ಗೆ ನಾನು ಅರ್ಜಿದಾರನ ವಿರುದ್ಧ ಸುಳ್ಳು ಮೊಕದ್ದಮೆ ದಾಖಲಿಸಿದ್ದೇನೆಂದರೆ ಸರಿಯಲ್ಲ. ಅರ್ಜಿದಾರರಿಗೂ ಹಾಗೂ ಜಪ್ತಿಪಡಿಸಿಕೊಂಡ ಸೀಸಂ ನಗಗಳಿಗೂ ಯಾವುದೇ ಸಂಬಂಧವಿಲ್ಲ ಎನ್ನುವದು ಸರಿಯಲ್ಲ. ಅವರ್ಸಾ ಬಸ್ ನಿಲ್ದಾಣದ ಎದುರ ಇರುವ ಅಂಗಡಿಯ ಮುಂದೆ ನಿಲ್ಲಿಸಿದ ಅರ್ಜಿದಾರರ ಬೈಕನ್ನು ನಾನು ತೆಗೆದುಕೊಂಡು ಹೋಗಿ ಸುಳ್ಳು ಮೊಕದ್ದಮೆ ದಾಖಲಿಸಿದ್ದೇನೆ ಎನ್ನುವದು ಸರಿಯಲ್ಲ. ಅಂಕಿಅಂಶಗಳಿಗೋಸ್ಕರ ಅರ್ಜಿದಾರರ ವಿರುದ್ಧ ಮೇಲಾಧಿಕಾರಿಗಳ ಮಾತನ್ನು ಕೇಳಿ ಸುಳ್ಳು ಫಿರ್ಯಾದಿ ದಾಖಲಿಸಿದ್ದೇನೆ ಎನ್ನುವದು ಸರಿಯಲ್ಲ.

**ಪಿಡಬ್ಲು–2** ಶ್ರೀ. ಸಾಯಿನಂದ ನಾರಾಯಣ ನಾಯ್ಕ ಇವರು ತಮ್ಮ ಸಾಕ್ಷ್ಯದಲ್ಲಿ ಈ ಪ್ರಕರಣ ದಾಖಲಾಗುವ ಕಾಲಕ್ಕೆ ನಾನು ಗುಳೆಯಲ್ಲಿ ಅರಣ್ಯ ವೀಕ್ಷಕನಾಗಿ ಕೆಲಸ ಮಾಡುತ್ತಿದೆ. ಆ ಸಮಯದಲ್ಲಿ ಹಟ್ಟಿಕೇರಿ ವನಪಾಲಕರಾಗಿ ಶ್ರೀ. ಗಣಪತಿ ನಾಯ್ಕ ಹಾಗೂ ಹಟ್ಟಿಕೇರಿ ಅರಣ್ಯರಕ್ಷಕರಾಗಿ ಮಹೇಶ ಕನಕಟ್ಟಿ ಯವರು ಕೆಲಸ ಮಾಡುತ್ತಿದ್ದರು. ದಿನಾಂಕ: 24–1–2007ರಂದು ರಾತ್ರಿ 10 ಗಂಟೆಗೆ ನಾನು ಗಣಪತಿ ವಿ. ನಾಯ್ಕ ಮಹೇಶ ಕನಕಟ್ಟಿ ಸೇರಿ ಬೈಕ್ ಮೇಲೆ ರಾತ್ರಿ 10 ಗಂಟೆಗೆ ಗಸ್ತು ತಿರುಗುತ್ತಿದ್ದೇವು. ಆಗ ಸಕಲಬೇಣ ಕಡೆಯಿಂದ ಭೂದೇವಿ ದೇವಸ್ಥಾನದ ಕಡೆಗೆ ಒಂದು ಬೈಕ್ ಬಂದಿದ್ದು ಅದರಲ್ಲಿ 2 ಜನರು ಇದ್ದರು. ಬೈಕ್ ನಲ್ಲಿ ಹಿಂದೆ ಕುಳಿತಿದ್ದ ವ್ಯಕ್ತಿಯು 2 ಕಟ್ಟಿಗೆ ತುಂಡು ಹಿಡಿದು ಕುಳಿತಿದ್ದ ಆ ಕಾರಣಕ್ಕೆ ನಾವು ಬೈಕನ್ನು ತಡೆದು ನಿಲ್ಲಿಸದೆವು ಪರಿಶೀಲಿಸಲಾಗಿ ಅವು ಸೀಸಂ ತುಂಡುಗಳಾಗಿದ್ದವು ಅವುಗಳಿಗೆ ಯಾವುದೆ ಇಲಾಖೆಯ ಛಪ್ಪಾ ವಗೈರೆ ಇರಲ್ಲಿಲ್ಲ. ಹಾಗೂ ಅವುಗಳ ಬಗ್ಗೆ ಪಾಸ್/ಪರ್ಮಿಟ್ ಕೇಳಲಾಗಿ ಅದೂ ಸಹ ಇರಲಿಲ್ಲ. ಬೈಕ್ ಹೊಡೆಯುತ್ತಿದವನ ಹೆಸರು ಕೇಳಲಾಗಿ ತಮ್ಮ ಹೆಸರು ಕೃಷ್ಣಾ ರಾಮಾ ಗೌಡ ಹಾಗೂ ಹಿಂದೆ ಕುಳಿತವನ ಹೆಸರು ಕೇಳಲಾಗಿ ಪುರುಷೊತ್ತಮ ತಿಮ್ಮಾ ಗೌಡ ಎಂದು ಹೇಳಿರುತ್ತಾರೆ. ಆದಿವಸ ಬೈಕ ಹೊಡೆಯುತ್ತಿದ್ದ ವ್ಯಕ್ತಿ ಈ ದಿವಸ ನ್ಯಾಯಾಲಯದ ಮುಂದೆ ಇರುತ್ತಾರೆ. ನಂತರ

ಸ್ಥಳಕ್ಕೆ ಶ್ರೀ. ದೀಪಕ ನಾಯಕ್ ಹಾಗೂ ಶ್ರೀ. ವಿ.ಪಿ. ನಾಯ್ಕ ಶಾಖಾ ವನಪಾಲಕ ಬಂದಿದ್ದು ಶ್ರೀ. ವಿ.ಪಿ. ನಾಯ್ಕ ಇವರು ಪಂಚನಾಮೆ ಬರೆದಿರುತ್ತಾರೆ. ಪಂಚನಾಮೆಯಡಿ ಸದರಿ ಬೈಕ್ ಹಾಗೂ ಸೀಸಂ ತುಂಡುಗಳನ್ನು ಜಫ್ತಿಪಡಿಸಿಕೊಂಡಿರುತ್ತಾರೆ. ಸದರಿ ಪಂಚನಾಮೆಯನ್ನು ಹಾಗೂ ನನ್ನ ಸಹಿಯನ್ನು ನೋಡಿದ್ದಲ್ಲಿ ಗುರುತ್ತಿಸುತ್ತೇನೆ. ಸಾಕ್ಷಿ ನೋಡಿ ಗುರುತಿಸಿದ ಪಂಚನಾಮೆಯು ಈಗಾಗಲೇ ನಿಶಾನೆ ಪಿ–1 ಎಂದು ಗುರುತಿಸಲಾಗಿದ್ದು ಸಾಕ್ಷಿಯ ಸಹಿಯನ್ನು 1–ಬಿ ಎಂದು ಗುರುತಿಸಲಾಯಿತು. ಸಾಕ್ಷಿದಾರರು ಬೈಕನ್ನು ನೋಡಿ ಗುರುತಿಸಿದ್ದು ಅದನ್ನು ಈಗಾಗಲೇ ಎಂ.ಓ–1 ಎಂದು ಗುರುತಿಸಲಾಗಿದೆ. ನನ್ನ ಜೊತೆ ನಿಶಾನಿ ಪಿ–1 ಪಂಚನಾಮೆಗೆ ಶ್ರೀ. ಮಹೇಶ ಕನಕಟ್ಟಿಯವರು ಸಹಿ ಹಾಕಿರುತ್ತಾರೆ. ಗುನ್ಹೆ ನಡೆದ ಸಮಯವು ರಾತ್ರಿ ಯಾದ ಕಾರಣ ಅಲ್ಲಿ ಯಾವುದೇ ಸ್ವತಂತ್ರ ಪಂಚಸಾಕ್ಷಿದಾರರು ಇಲ್ಲದ ಕಾರಣ ನಾವೇ ಪಂಚರಾಗಿ ಸಹಿ ಮಾಡಿದ್ದು ಇರುತ್ತದೆ. ಆದಿನ ಜಪ್ತಪಡಿಸಲಾದ ವಾಹನ ಹಿರೊಹೊಂಡಾ ಸ್ಪಲೆಂಡರ್ ಮೋಟಾರ ಸೈಕಲ್ ಆಗಿದ್ದು ಕೆಎ–30/ಕೆ–7852 ಆಗಿರುತ್ತದೆ. ನಂತರ ಆರೋಪಿತರು ಹಾಗೂ ಜಪ್ತ ಮಾಲಿನೊಂದಿಗೆ ನಾವು ವಲಯ ಕಚೇರಿ ಅಂಕೋಲಾಗೆ ಬಂದಿರುತ್ತೇವೆ. . ಕಾರಣ, ಜಪ್ತಪಡಿಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ಪ್ರಾರ್ಥಿಸುತ್ತೇನೆ ಎಂದು ಹೇಳಿರುತ್ತಾರೆ.

**ಪಾಟೀ ಸವಾಲು ಶ್ರೀ.ಜಿ.ಪಿ.ನಾಯ್ಕ ವಕೀಲರವರಿಂದ:**

ನಿಶಾನೆ ಪಿ–1 ಪಂಚನಾಮೆಯ ವಿವರಗಳು ನನಗೆ ಗೊತ್ತಿರುತ್ತದೆ. ನಾವು ಪ್ರಥಮ ಬಾರಿಗೆ ಅಂದಾಜು 150 ಮೀಟರ್ ಅಂತರದಲ್ಲಿ ಬೈಕ್ ಬರುತ್ತಿದ್ದದನ್ನು ನೋಡಿದ್ದೇವೆ. ನಾವು ಮೊದಲು ಕಚ್ಚಾ ರಸ್ತೆಯಲ್ಲಿ ನಿಂತುಕೊಂಡಿದ್ದೇವು. ಬೈಕ್ ಬರುವದನ್ನು ನೋಡಿ ಹೆದ್ದಾರಿಯನ್ನು ದಾಟಿ ಭೂದೇವಿ ದೇವಸ್ಥಾನದ ಹತ್ತಿರ ಇರುವ ಕಚ್ಚಾ ರಸ್ತೆಗೆ ಬಂದೆವು. ಜಪ್ತಪಡಿಸಿದ ಸೀಸಂ ತುಂಡುಗಳು ಅಂದಾಜು ಪ್ರತಿಯೊಂದು 1 ಮೀಟರ್ ಉದ್ದ ಇತ್ತು. ನಾವು 9 ಗಂಟೆಗೆ ರಾತ್ರಿ ಗಸ್ತುಗೆ ಹೊರಟಿದ್ದು ಘಟನಾ ಸ್ಥಳಕ್ಕೆ ಬಂದಾಗ ಗಂಟೆ 9.30 ರಿಂದ 9.45 ಆಗಿತ್ತು. ನಾವು ಅಲ್ಲಿ ಬರುವಾಗ ಅಲ್ಲಿ ಅಂಗಡಿಗಳು ತೆರೆದಿತ್ತೊ ಇಲ್ಲವೋ ಎಂಬುದಾಗಿ ತಿಳಿದಿಲ್ಲ. ಗುನ್ಹೆ ನಡೆದ ಸ್ಥಳದಲ್ಲಿ ಯಾವಾಗಲೂ ವಾಹನಗಳು ಓಡಾಡುತ್ತಿರುತ್ತವೆ ಹಾಗೂ ಜನ ಸಂಚಾರ ಇರುತ್ತವೆ ಎಂದರೆ ಆ ಸಮಯದಲ್ಲಿ ಅಲ್ಲಿ ಯಾರೂ ಇರಲಿಲ್ಲವೆಂದು ಸಾಕ್ಷಿ ಉತ್ತರಿಸುತ್ತಾರೆ. ಇಲಾಖೆಯ ಸಾಕ್ಷಿದಾರರ ಹೊರತಾಗಿ ಬೇರೆ ಯಾರೂ ಸಾಕ್ಷಿದಾರರ ಸಹಿಯನ್ನು ಪಂಚನಾಮೆಗೆ ಪಡೆದಿಲ್ಲವೆಂದರೆ ಆ ಸಮಯದಲ್ಲಿ ಅಲ್ಲಿ ಯಾರೂ ಇರಲಿಲ್ಲ ವೆಂದು ಸಾಕ್ಷಿ ಉತ್ತರಿಸುತ್ತಾರೆ. ವಿ.ಪಿ. ನಾಯ್ಕ ಇವರು ಗುನ್ಹಾ ಸ್ಥಳದಲ್ಲಿಯೇ ರಾತ್ರಿ 10 ಗಂಟೆ ಸಮಯದಲ್ಲಿ ನಿಶಾನೆ ಪಿ–1 ಪಂಚನಾಮೆ ಬರೆದಿರುತ್ತಾರೆ. ವಿ.ಪಿ ನಾಯ್ಕ ಇವರು ಪಂಚನಾಮೆ ಬರೆಯಬೇಕಾದರೆ ನಮ್ಮ ಹೊರತಾಗಿ ಬೇರೆ ಯಾರು ಇರಲಿಲ್ಲವೆಂದರೆ ಸರಿ. ನಿಶಾನೆ ಪಿ–1 ಪಂಚನಾಮೆ ವಿವರಗಳು ನನಗೆ ಗೊತ್ತಿಲ್ಲ ಹಾಗೂ ಸ್ಥಳದಲ್ಲಿ ನಾನು ಅದಕ್ಕೆ ಸಹಿ ಹಾಕಲಿಲ್ಲವೆಂದರೆ ಅದು ಸರಿಯಲ್ಲ. ಮೇಲಾಧಿಕಾರಿಗಳು ನಿಶಾನೆಪಿ–1 ಪಂಚನಾಮೆಗೆ ಕಚೇರಿಯಲ್ಲಿ ನನ್ನ ಸಹಿ ಪಡೆದಿದ್ದಾರೆ ಎಂದರ ಸರಿಯಲ್ಲ. ಕಾರಣ, ಜಪ್ತಪಡಿಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ಪ್ರಾರ್ಥಿಸುತ್ತೇನೆ.

**ಪಿಡಬ್ಲು–3** 2004 ರಿಂದ ಸಪ್ಟೆಂಬರ–2007 ರ ವರೆಗೆ ನಾನು ಶಾಖಾ ವನಪಾಲಕ ಅಂಕೋಲಾ ಎಂದು ಕೆಲಸ ಮಾಡಿದ್ದೇನೆ. ಈ ಪ್ರಕರಣ ದಾಖಲಾಗುವ ಕಾಲಕ್ಕೆ ಹಟ್ಟಿಕೇರಿ ವನಪಾಲಕರಾಗಿ ಪ್ರ.ಸ. 1 ಇವರು ಹಾಗೂ ಹಟ್ಟಿಕೇರಿ ಅರಣ್ಯ ರಕ್ಷಕರಾಗಿ ಮಹೇಶ ಕನಕಟ್ಟಿ ಇವರು ಕೆಲಸ ಮಾಡುತ್ತಿದ್ದರು. ದಿನಾಂಕ: 24–1–2007 ರಂದು ನಾನು ಹಾಗೂ ದೀಪಕ ಆನಂದು ನಾಯ್ಕ, ಶಾಖಾವನಪಾಲಕ, ಬಾಳೇಗುಳಿ ಇವರು ಸೇರಿ ಬೈಕ್ ಮೇಲೆ ಅವರ್ಸಾಕಡೆ ಗಸ್ತಿಗೆ ಹೋಗುತ್ತಿರುವಾಗ ಅವರ್ಸಾದ ಬೂದೇವೆ ದೇವಸ್ಥಾನದ ಹತ್ತಿರ ಗಣಪತಿ ವಿಠ್ಠಲ ನಾಯ್ಕ, ಮಹೇಶ ಕನಕಟ್ಟಿ ಹಾಗೂ ಸಾಯಿನಂದ ನಾಯ್ಕ ಇವರು ಒಂದು ಬೈಕನ್ನು ತಡೆಹಿಡಿದು ನಿಲ್ಲಿಸಿದರು. ಪ್ರ.ಸ–1 ಇವರು ಬೈಕನ್ನು ಪರಿಶೀಲಿಸಲಾಗಿ ಅದರಲ್ಲಿ ಹಿಂದೆ ಕುಳಿತಂತ ವ್ಯಕ್ತಿಯು 2 ಕಟ್ಟಿಗೆ ತುಂಡುಗಳನ್ನು ಹಿಡಿದುಕೊಂಡು ಕುಳಿತಿದ್ದು ಕಂಡು ಬಂದಿತು. ಪರಿಶಿಲಿಸಲಾಗಿ ಅದು ಸೀಸಂ ಜಾತಿಯ ತುಂಡುಗಳಾಗಿದ್ದು ಅದಕ್ಕೆ ಇಲಾಖೆಯ ಯಾವುದೇ ಛಪ್ಪಾ ವಗ್ಯೆರೆ ಇರಲ್ಲಿಲ್ಲ. ಈ ಬಗ್ಗೆ ಪ್ರ.ಸ–1 ಇವರು ವಿಚಾರಿಸಿದ್ದು ಅದಕ್ಕೆ ಬೈಕ್ ಮೇಲೆ ಕುಳಿತವರು ಯಾವುದೇ ಪಾಸ್ ಅಥವಾ ಪರ್ಮಿಟನ್ನು ತೋರಿಸಿದ್ದು ಇರುವದಿಲ್ಲ. ಕಾರಣ ಅದನ್ನು ಅವರು ಅನದಿಕೃತವಾಗಿ ಸಾಗಾಟ ಮಾಡುತ್ತಿದದ ಬಗ್ಗೆ ಖಾತ್ರಿಯಾಗಿದ್ದು ಈ ಬಗ್ಗೆ ಅವರ ಹೆಸರು ವಿಳಾಸವನ್ನು ಪ್ರ.ಸ–1 ಕೇಳಿದ್ದು ಬೈಕ್ ಚಲಾಯಿಸುತ್ತಿದ್ದ ವ್ಯಕ್ತಿಯ ಹೆಸರು ಕೃಷ್ಣಾ ರಾಮಾ ಗೌಡ ಹಾಗೂ ಹಿಂದೆ ಕುಳಿತವನ ಹೆಸರು ಕೇಳಲಾಗಿ ಪುರುಷೊತ್ತಮ ತಿಮ್ಮಾ ಗೌಡ ಸಾ: ಸಕಲಬೇಣ ಎಂತಾ ಹೇಳಿರುತ್ತಾರೆ. ಬೈಕ್ ಬಿಡುತ್ತಿದ್ದ ವ್ಯಕ್ತಿ ಈಗಾ ನ್ಯಾಯಾಲಯದ ಮುಂದೆ ಹಾಜರಿರುತ್ತಾರೆ. ಸ್ಥಳದಲ್ಲಿ ಈ ಬಗ್ಗೆ ಪಂಚನಾಮೆ ಮಾಡಿದ್ದು ಪಂಚನಾಮೆ ನಾನೆ ಬರದಿರುತ್ತೇನೆ. ಪಂಚನಾಮೆಯಡಿ ಸದರಿ ಬೈಕ್ ಹಾಗೂ ಸೀಸಂ ತುಂಡುಗಳನ್ನು ಜಪ್ತಪಡಿಸಿಕೊಂಡಿರುತ್ತೇನೆ. ಆದಿನ ನಾನು ಜಪ್ತ ಪಡಿಸಿದ ಬೈಕ್ ಹಿರೊಹೊಂಡಾ ಸ್ಪ್ಲೆಂಡರ್ ಕಪ್ಪು ಬಣ್ಣದಾಗಿರತ್ತದೆ. ಹಾಗೂ ಅದರ ನಂಬರ ಕೆಎ–30/ಕೆ–7852 ಆಗಿರುತ್ತದೆ. ಸೀಸಂ ತುಂಡುಗಳು ಅಜಮಾಸು 1 ಮೀಟರ್ ಉದ್ದ ಇರುತ್ತದೆ. ನಾನು ಬರೆದ ಪಂಚನಾಮೆ ಹಾಗೂಸಹಿಯನ್ನು ನೋಡಿದ್ದಲ್ಲಿ ಗುರುತಿಸುತ್ತೇನೆ. ಪಂಚನಾಮೆ ಯನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿಶಾನೆಪಿ–1 ಎಂದು ಗುರಿತಿಸಿದ್ದು ಸಾಕ್ಷಿಯ ಸಹಿಯನ್ನು 1–ಸಿ ಎಂದು ಗುರುತಿಸಿಲಾಯಿತು. ಬೈಕ್ ನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ಈಗಾಗಲೇ ಎಂಒ–1 ಎಂದು ಗುರುತಿಸಲಾಗಿದೆ. ಗುನ್ಹೆ ನಡೆದ ವೇಳೆ ರಾತ್ರಿಯಾಗಿದ್ದರಿಂದ ಅಲ್ಲಿ ಯಾರೂ ಸ್ವತಂತ್ರ ಸಾಕ್ಷಿದಾರರು ಲಭ್ಯವಿರಲ್ಲಿಲ್ಲ. ಕಾರಣ, ಇಲಾಖೆಯ ಸಿಬ್ಬಂದಿಗಳೇ ಪಂಚರಾಗಿ ಸಹಿ ಮಾಡಿದ್ದು ಇರುತ್ತದೆ. ನಂತರ ಆರೋಪಿತರು ಹಾಗೂ ಮುದ್ದೆಮಾಲಿನೊಂದಿಗೆ ನಾವು ವಲಯ ಕಚೇರಿ, ಅಂಕೋಲಾಕ್ಕೆ ಬಂದಿರುತ್ತೇವೆ. ಕಾರಣ, ಜಪ್ತಪಡಿಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ಪ್ರಾರ್ಥಿಸುತ್ತೇನೆ.

**ಪಾಟೀ ಸವಾಲು ಶ್ರೀ.ಜಿ.ಪಿ.ನಾಯ್ಕ ವಕೀಲರವರಿಂದ:**

ನಾನು ಅಂಕೋಲಾದಿಂದ ಸುಮಾರು ರಾತ್ರಿ 9.15 ಗಂಟೆಗೆ ಗಸ್ತು ತಿರುಗಲು ಹೊರಟ್ಟಿದ್ದೆ. ನಾನು ಅಂಕೋಲಾದಿಂದ ಒಬ್ಬನೇ ಹೊರಟಿದ್ದು ಬಾಳೇಗುಳಿಯಲ್ಲಿ ದೀಪಕ ಎ. ನಾಯ್ಕ, ಶಾಖಾ ವನಪಾಲಕ ನನ್ನೊಟ್ಟಿಗೆ ಬಂದಿರುತ್ತಾರೆ. ಸುಮಾರು ರಾತ್ರಿ 10 ಗಂಟೆಗೆ ನಾವು ಗುನ್ಹಾ ಸ್ಥಳಕ್ಕೆ ಹೋಗಿ ತಲುಪಿದ್ದೇವೆ. ಗುನ್ಹಾ ಸ್ಥಳದ ಅಕ್ಕ ಪಕ್ಕ ಅಂದಾಜು 10 ವಾಸ್ತವ್ಯದ ಮನೆಗಳು ಇರುತ್ತವೆ. ಅಂಗಡಿ ಇರುವ ಬಗ್ಗೆ ನನಗೆ ಯಾವುದೇ ಮಾಹಿತಿ ಇರುವದಿಲ್ಲ. ಗುನ್ಹೆ ನಡೆದಿದೆ ಎನ್ನುವ ಸ್ಥಳದಲ್ಲಿ ಯಾವಾಗಲೂ ಜನಸಂಚಾರ ಇರುತ್ತದೆ ಎಂದರೆ ಸರಿಯಲ್ಲ. ಪಂಚನಾಮೆ ಕಾಲಕ್ಕೆ ಅಕ್ಕಪಕ್ಕದ ವಾಸ್ತವ್ಯದ ಮನೆಯವರು ಬಂದಿರುವದಿಲ್ಲ. ಪಂಚನಾಮೆಗೆ ನಮ್ಮ ಇಲಾಖೆಯ ಸಿಬ್ಬಂದಿಗಳೇ ಸಹಿ ಹಾಕಿದ್ದಾರೆ ಎಂದರೆ ಸರಿ. ನಿಶಾನೆ ಪಿ–1 ನ್ನು ನಾವು ವಲಯ ಕಚೇರಿಯಲ್ಲಿ ತಯಾರಿಸಿದ್ದೇವೆ ಎಂದರೆ ಸರಿಯಲ್ಲ. ಮೇಲಾಧಿಕಾರಿಗಳ ಮಾತನ್ನು ಕೇಳಿ ನಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ. ಅರ್ಜಿದಾರರು ಗುನ್ಹಾ ಸ್ಥಳದ ಎದುರು ಅಂಗಡಿಯಲ್ಲಿ ನಿಲ್ಲಿಸಿದ ಬೈಕನ್ನು ನಾವೇ ತೆಗೆದುಕೊಂಡು ಹೋಗಿ ಅವರ ಮೇಲೆ ಸುಳ್ಳು ಮೊಕದ್ದಮೆ ದಾಖಲಿಸಿದ್ದೇವೆ ಎಂದರೆ ಸರಿಯಲ್ಲ.

**ಪಿಡಬ್ಲು–4:** 2006 ರಿಂದ 2012 ರ ವರೆಗೆ ನಾನು ಶಾಖಾ ವನಪಾಲಕ ಎಂತಾ ಬಾಳೇಗುಳಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದೆ. ಈ ಪ್ರಕರಣ ದಾಖಲಾಗುವ ಕಾಲಕ್ಕೆ ಹಟ್ಟಿಕೇರಿ ಶಾಖಾ ವನಪಾಲಕನಾಗಿ ಗಣಪತಿ ವಿಠ್ಠಲ ನಾಯ್ಕ ಹಟ್ಟಿಕೇರಿ ಅರಣ್ಯ ರಕ್ಷಕರಾಗಿ ಮಹೇಶ ಕನಕಟ್ಟಿ ಮತ್ತು ಅರಣ್ಯ ವೀಕ್ಷಕರಾಗಿ ಸಾಯಿನಂದ ನಾರಾಯಣ ನಾಯ್ಕ ಕೆಲಸ ಮಾಡುತ್ತಿದ್ದರು. ಮತ್ತು ಅಂಕೋಲಾ ವಲಯ ಅರಣ್ಯಾಧಿಕಾರಿಗಳಾಗಿ ಶ್ರೀ. ಸಿ.ಜಿ. ನಾಯ್ಕ ಇವರು ಕೆಲಸ ನಿರ್ವಹಿಸುತ್ತಿದ್ದರು. ಇವರು ಪ್ರಸ್ತುತ ಮಾನ್ಯ ನ್ಯಾಯಾಂಗ ಬಂಧನದಲ್ಲಿ ಬೆಂಗಳೂರಿನಲ್ಲಿ ಇರುತ್ತಾರೆ.

ದಿನಾಂಕ: 24–1–2007 ರಂದು ನಾನು ಹಾಗೂ ವಿನಾಯಕ ಪ್ರಕಾಶ ನಾಯ್ಕ, ಶಾಖಾವನಪಾಲಕ, ಅಂಕೋಲಾ ಇವರು ಸೇರಿ ಬೈಕ್ ಮೇಲೆ ಅವರ್ಸಾಕಡೆ ಗಸ್ತಿಗೆ ಹೋಗುತ್ತಿರುವಾಗ ಅವರ್ಸಾದ ಬೂದೇವಿ ದೇವಸ್ಥಾನದ ಹತ್ತಿರ ಗಣಪತಿ ವಿಠ್ಠಲ ನಾಯ್ಕ, ಮಹೇಶ ಕನಕಟ್ಟಿ ಹಾಗೂ ಸಾಯಿನಂದ ನಾಯ್ಕ ಇವರು ಒಂದು ಬೈಕನ್ನು ತಡೆಹಿಡಿದು ನಿಲ್ಲಿಸಿದರು. ಪ್ರ.ಸ–1 ಇವರು ಬೈಕನ್ನು ಪರಿಶೀಲಿಸಲಾಗಿ ಅದರಲ್ಲಿ ಹಿಂದೆ ಕುಳಿತಂತ ವ್ಯಕ್ತಿಯು 2 ಕಟ್ಟಿಗೆ ತುಂಡುಗಳನ್ನು ಹಿಡಿದುಕೊಂಡು ಕುಳಿತಿದ್ದು ಕಂಡು ಬಂದಿತು. ಪರಿಶಿಲಿಸಲಾಗಿ ಅದು ಸೀಸಂ ಜಾತಿಯ ತುಂಡುಗಳಾಗಿದ್ದು ಅದಕ್ಕೆ ಇಲಾಖೆಯ ಯಾವುದೇ ಛಪ್ಪಾ ವಗೈರೆ ಇರಲ್ಲಿಲ್ಲ. ಈ ಬಗ್ಗೆ ಪ್ರ.ಸ–1 ಇವರು ವಿಚಾರಿಸಿದ್ದು ಅದಕ್ಕೆ ಬೈಕ್ ಮೇಲೆ ಕುಳಿತವರು ಯಾವುದೇ ಪಾಸ್ ಅಥವಾ ಪರ್ಮಿಟನ್ನು ತೋರಿಸಿದ್ದು ಇರುವದಿಲ್ಲ. ಕಾರಣ ಅದನ್ನು ಅವರು ಅನದಿಕೃತವಾಗಿ ಸಾಗಾಟ ಮಾಡುತ್ತಿದ್ದ ಬಗ್ಗೆ ಖಾತ್ರಿಯಾಗಿದ್ದು ಈ ಬಗ್ಗೆ ಅವರ ಹೆಸರು ವಿಳಾಸವನ್ನು ಪ್ರ.ಸ–1 ಕೇಳಿದ್ದು ಬೈಕ್ ಚಲಾಯಿಸುತ್ತಿದ್ದ ವ್ಯಕ್ತಿಯ ಹೆಸರು ಕೃಷ್ಣಾ ರಾಮಾ ಗೌಡ ಹಾಗೂ ಹಿಂದೆ ಕುಳಿತವನ ಹೆಸರು ಕೇಳಲಾಗಿ ಪುರುಷೊತ್ತಮ ತಿಮ್ಮಾ ಗೌಡ ಸಾ: ಸಕಲಬೇಣ ಎಂತಾ ಹೇಳಿರುತ್ತಾರೆ. ಬೈಕ್ ಬಿಡುತ್ತಿದ್ದ ವ್ಯಕ್ತಿ ಈಗಾ ನ್ಯಾಯಾಲಯದ ಮುಂದೆ ಹಾಜರಿರುತ್ತಾರೆ. ಸ್ಥಳದಲ್ಲಿ ಈ ಬಗ್ಗೆ ಪಂಚನಾಮೆ ಮಾಡಿದ್ದು ಪಂಚನಾಮೆಯನ್ನು ವಿನಾಯಕ ಪ್ರಕಾಶ ನಾಯ್ಕ ಬರದಿರುತ್ತಾರೆ. ಪಂಚನಾಮೆಯಡಿ ಸದರಿ ಬೈಕ್ ಹಾಗೂ ಸೀಸಂ ತುಂಡುಗಳನ್ನು ಜಪ್ತಪಡಿಸಿಕೊಂಡಿರುತ್ತೇನೆ. ಆದಿನ ನಾನು ಜಪ್ತ ಪಡಿಸಿದ ಬೈಕ್ ಹಿರೊಹೊಂಡಾ ಸ್ಪ್ಲೆಂಡರ್ ಕಪ್ಪು ಬಣ್ಣದಾಗಿರತ್ತದೆ. ಹಾಗೂ ಅದರ ನಂಬರ ಕೆಎ–30/ಕೆ–7852 ಆಗಿರುತ್ತದೆ. ಸೀಸಂ ತುಂಡುಗಳು ಅಜಮಾಸು 1 ಮೀಟರ್ ಉದ್ದ ಇರುತ್ತದೆ. ನಾನು ಬರೆದ ಪಂಚನಾಮೆ ಹಾಗೂ ಸಹಿಯನ್ನು ನೋಡಿದ್ದಲ್ಲಿ ಗುರುತಿಸುತ್ತೇನೆ. ಪಂಚನಾಮೆ ಯನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿಶಾನೆಪಿ–1 ಎಂದು ಗುರಿತಿಸಿದ್ದು ಸಾಕ್ಷಿಯ ಸಹಿಯನ್ನು 1–ಡಿ ಎಂದು ಗುರುತಿಸಿಲಾಯಿತು. ಬೈಕ್ ನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ಈಗಾಗಲೇ ಎಂಓ–1 ಎಂದು ಗುರುತಿಸಲಾಗಿದೆ. ಗುನ್ನೆ ನಡೆದ ವೇಳೆ ರಾತ್ರಿಯಾಗಿದ್ದರಿಂದ ಅಲ್ಲಿ ಯಾರೂ ಸ್ವತಂತ್ರ ಸಾಕ್ಷಿದಾರರು ಲಭ್ಯವಿರಲ್ಲಿಲ್ಲ. ಕಾರಣ, ಇಲಾಖೆಯ ಸಿಬ್ಬಂದಿಗಳೇ ಪಂಚರಾಗಿ ಸಹಿ ಮಾಡಿದ್ದು ಇರುತ್ತದೆ. ನಂತರ ಆರೋಪಿತರು ಹಾಗೂ ಮುದ್ದೆಮಾಲಿನೊಂದಿಗೆ ನಾವು ವಲಯ ಕಚೇರಿ, ಅಂಕೋಲಾಕ್ಕೆ ಬಂದಿರುತ್ತೇವೆ. ಈ ಬಗ್ಗೆ ಗಣಪತಿ ವಿಠ್ಠಲ ನಾಯ್ಕ ರವರು ಪ್ರಥಮ ವರ್ತಮಾನ ವರದಿಯನ್ನು ದಾಖಲಿಸಿದ್ದು ಹಾಗೂ ತನಿಖಾ ವರದಿ ತಯಾರಿಸಿ, ಶ್ರೀ ಸಿ.ಜಿ. ನಾಯ್ಕ, ವಲಯ ಅರಣ್ಯಾಧಿಕಾರಿ ರವರಿಗೆ ಸಲ್ಲಿಸಿರುತ್ತಾರೆ. ಅವರು ತನಿಖೆ ಕೈಕೊಂಡು ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿರುತ್ತಾರೆ. ಕಾರಣ, ಜಪ್ತಪಡಿಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ಪ್ರಾರ್ಥಿಸುತ್ತೇನೆ.

**ಪಾಟೀ ಸವಾಲು ಶ್ರೀ.ಜಿ.ಪಿ.ನಾಯ್ಕ ವಕೀಲರವರಿಂದ:**

ನಾನು ಅಂಕೋಲಾದಿಂದ ಸುಮಾರು ರಾತ್ರಿ 9.15 ಗಂಟೆಗೆ ಗಸ್ತು ತಿರುಗಲು ಹೊರಟ್ಟಿದ್ದೆ. ನಾನು ಅಂಕೋಲಾದಿಂದ ಒಬ್ಬನೇ ಹೊರಟಿದ್ದು ಬಾಳೇಗುಳಿಯಲ್ಲಿ ವಿನಾಯಕ ಪ್ರಕಾಶ ನಾಯ್ಕ ಶಾಖಾ ವನಪಾಲಕ ನನ್ನೊಟ್ಟಿಗೆ ಬಂದಿರುತ್ತಾರೆ. ಸುಮಾರು ರಾತ್ರಿ 10 ಗಂಟೆಗೆ ನಾವು ಗುನ್ನಾ ಸ್ಥಳಕ್ಕೆ ಹೋಗಿ ತಲುಪಿದ್ದೇವೆ. ಗುನ್ನಾ ಸ್ಥಳದ ಅಕ್ಕ ಪಕ್ಕ ಅಂದಾಜು 10 ವಾಸ್ತವ್ಯದ ಮನೆಗಳು ಇರುತ್ತವೆ. ಅಂಗಡಿ ಇರುವ ಬಗ್ಗೆ ನನಗೆ ಯಾವುದೇ ಮಾಹಿತಿ ಇರುವದಿಲ್ಲ. ಗುನ್ನೆ ನಡೆದಿದೆ ಎನ್ನುವ ಸ್ಥಳದಲ್ಲಿ ಯಾವಾಗಲೂ ಜನಸಂಚಾರ ಇರುತ್ತದೆ ಎಂದರೆ ಸರಿಯಲ್ಲ. ಪಂಚನಾಮೆ ಕಾಲಕ್ಕೆ ಅಕ್ಕಪಕ್ಕದ ವಾಸ್ತವ್ಯದ ಮನೆಯವರು ಬಂದಿರುವದಿಲ್ಲ. ಪಂಚನಾಮೆಗೆ ನಮ್ಮ ಇಲಾಖೆಯ ಸಿಬ್ಬಂದಿಗಳೇ ಸಹಿ ಹಾಕಿದ್ದಾರೆ ಎಂದರೆ ಸರಿ. ನಿಶಾನೆ ಪಿ–1 ನ್ನು ನಾವು ವಲಯ ಕಚೇರಿಯಲ್ಲಿ ತಯಾರಿಸಿದ್ದೇವೆ ಎಂದರೆ ಸರಿಯಲ್ಲ. ಮೇಲಾಧಿಕಾರಿಗಳ ಮಾತನ್ನು ಕೇಳಿ ನಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ. ಅರ್ಜಿದಾರರು ಗುನ್ನಾ ಸ್ಥಳದ ಎದುರು ಅಂಗಡಿಯಲ್ಲಿ ನಿಲ್ಲಿಸಿದ ಬೈಕನ್ನು ನಾವೇ ತೆಗೆದುಕೊಂಡು ಹೋಗಿ ಅವರ ಮೇಲೆ ಸುಳ್ಳು ಮೊಕದ್ದಮೆ ದಾಖಲಿಸಿದ್ದೇವೆ ಎಂದರೆ ಸರಿಯಲ್ಲ. ಸ್ವತಂತ್ರ ಸಾಕ್ಷಿಗಳ ಸಹಿಯನ್ನು ನಿಶಾನೆಪಿ–1ಕ್ಕೆ ಪಡೆಯಲಿಲ್ಲ ಹಾಗೂ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಿಲ್ಲ ಎಂದರೆ ಸರಿ. ಆರೋಪಿತರ ವಾಹನವನ್ನು ಗಣಪತಿ ವಿಠ್ಠಲ ನಾಯ್ಕ ರವರು ಹಿಡಿದ ಕೂಡಲೇ ನಾನು ಸ್ಥಳಕ್ಕೆ ಹೋಗಿರುತ್ತೇನೆ.

**ಅಂಶ ನಂ. (ಆ):**

ದಿನಾಂಕ: 24–01–2007 ರಂದು ರಾತ್ರಿ ವೇಳೆಯಲ್ಲಿ ಶಾಖಾ ವನಪಾಲಕ ಹಟ್ಟಿಕೇರಿ, ಅರಣ್ಯ ರಕ್ಷಕ ಹಟ್ಟಿಕೇರಿ ಮತ್ತು ಅರಣ್ಯ ವೀಕ್ಷಕ ಗುಳೇ ಇವರು ಬೈಕ್ ಮೇಲೆ ಅವರ್ಸಾದಲ್ಲಿ ಗಸ್ತು ತಿರುಗುತ್ತಾ ಇರುವಾಗ ರಾತ್ರಿ ಸುಮಾರು 10.00 ಘಂಟೆಗೆ ಯಾರೋ ಇಬ್ಬರು ಅವರ್ಸಾ ಬಜಾರ್ ಕಡೆಯಿಂದ ಭೂದೇವಿ ದೇವಸ್ಥಾನದ ಕಡೆಗೆ ಮೋಟಾರ್ ಬೈಕ್ ಮೇಲೆ ಕಟ್ಟಿಗೆಯನ್ನು ಒಯ್ಯುತ್ತಿರುವದು ರಸ್ತೆ ದೀಪದ ಬೆಳಕಿಗೆ ಕಂಡು ಬಂದಂತೆ ಅವರನ್ನು ಹಿಂಬಾಲಿಸಿ ಬೈಕ್ ತಡೆದು ನಿಲ್ಲಿಸಿ ಸದ್ರಿ ಕಟ್ಟಿಗೆಗೆ ಸಂಬಂಧಪಟ್ಟಂತೆ ಪಾಸು ವ ಫರ್ಮಿಟ್ ಇತ್ಯಾದಿ ಕೇಳಲಾಗಿ ಇಲ್ಲವೆಂದು ಹೇಳಿರುತ್ತಾರೆ. ಹಾಗೂ ಬೈಕ್ ಸವಾರನಿಗೆ ಹೆಸರು ಮತ್ತು ವಿಳಾಸ ಕೇಳಲಾಗಿ ಅವನು ತನ್ನ ಹೆಸರು ಕೃಷ್ಣಾ ರಾಮಾ ಗುನಗಿ ಸಾ: ಹಾರವಾಡಾ ಎಂದು ಹಿಂದೆ ಕುಳಿತವನು ಪುರುಷೋತ್ತಮ ತಿಮ್ಮಾ ಗೌಡ ಸಾ: ಸಕಲಬೇಣ ಎಂದು ಹೇಳಿರುತ್ತಾರೆ. ರಾತ್ರಿ ಸಮಯವಾಗಿರುವದರಿಂದ ಸ್ಥಳದಲ್ಲಿ ಸಾರ್ವಜನಿಕರು ಯಾರು ಇಲ್ಲದೇ ಇದ್ದ ಕಾರಣ ಇಲಾಖಾ ಸಿಬ್ಬಂದಿಗಳಾದ ಶ್ರೀ. ಮಹೇಶ ಶಿವಶರಣಪ್ಪ ಕನಕಟ್ಟಿ, ಅರಣ್ಯ ರಕ್ಷಕ ಹಟ್ಟಿಕೇರಿ ಮತ್ತು ಶ್ರೀ. ಸಾಯಿನಂದ ನಾರಾಯಣ ನಾಯ್ಕ, ಅರಣ್ಯ ವೀಕ್ಷಕ ಗುಳೇ ಇವರನ್ನು ಪಂಚರನ್ನಾಗಿಸಿಕೊಂಡು ಸದ್ರಿ ಕಟ್ಟಿಗೆಯನ್ನು ಪರಿಶೀಲಿಸಲಾಗಿ ಅದು ಸೀಸಂ ಜಾತಿಯ ಕೈ ಚಿರಾವು ನಗಗಳಾಗಿದ್ದು ಅವುಗಳ ಒಟ್ಟೂ ಅಳತೆ 2=0.02 ಘ.ಮೀ. ಆಗಿರುತ್ತದೆ. ಮತ್ತು ಮೋಟಾರ್ ಬೈಕ್‌ನ್ನು ಪರಿಶೀಲಿಸಲಾಗಿ ಅದು ಹಿರೋಹೊಂಡಾ ಸ್ಪ್ಲೆಂಡರ್ ಬೈಕ್ ಅದರ ನೋಂದಣಿ ಸಂಖ್ಯೆ: ಕೆಎ–30/ಕೆ–7852 ಆಗಿದ್ದು ಖಾತ್ರಿ ಮಾಡಿಕೊಂಡು ಸದರ ಸೀಸಂ ಕೈ ಚಿರಾವು ನಗಗಳು 2=0.112 ಘ.ಮೀ. ಮುದ್ದೆ ಮ್ಹಾಲು ಇದನ್ನು ಅನಧಿಕೃತವಾಗಿ ಸಾಗಿಸುತ್ತಿರುವ ಬಗ್ಗೆ ದೃಢಪಟ್ಟಿಕೊಂಡು ಶಾಖಾ ವನಪಾಲಕ, ಹಟ್ಟಿಕೇರಿ ಇವರು ಪಂಚರ ಸಮಕ್ಷಮ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 62, 81ಎ, 80 ಮತ್ತು 104ಎ ಪ್ರಕಾರ ಪ್ರಥಮ ಮಾಹಿತಿ ವರದಿ ಸಂಖ್ಯೆ: 21/2006–07ರ ಪ್ರಕಾರ ಅರಣ್ಯ ಮೊಕದ್ದಮೆ ದಾಖಲಿಸಿಕೊಂಡು ನಂತರ ಪಂಚನಾಮೆಯನ್ನು ರಸ್ತೆಯ ದೀಪದ ಸಹಾಯದಿಂದ ರಾತ್ರಿ 10.00 ಘಂಟೆಯಿಂದ ಪ್ರಾರಂಭಿಸಿ ರಾತ್ರಿ 11.30 ಘಂಟೆಯವರೆಗೆ ಬರೆದು ಮುಗಿಸಿದ್ದು ಇರುತ್ತದೆ. ನಂತರ ಗುನ್ನೆಗೆ ಬಳಸಿದ ವಾಹನ ಹಾಗೂ ಜಪ್ತ ಕಟ್ಟಿಗೆಯನ್ನು ವಲಯ ಅರಣ್ಯಾಧಿಕಾರಿ, ಅಂಕೋಲಾ ಇವರ ಸಮಕ್ಷಮ ಹಾಜರುಪಡಿಸಿದ್ದು ಇರುತ್ತದೆ. ವಲಯ ಅರಣ್ಯಾಧಿಕಾರಿ, ಅಂಕೋಲಾ ಇವರ ವರದಿ ದಿನಾಂಕ: 27–01–2007 ರಂದು ಜಪ್ತ ವಾಹನ ಮತ್ತು ಕಟ್ಟಿಗೆಯನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿದ್ದು ಇರುತ್ತದೆ. ಸದರ ವಾಹನವು ಅರಣ್ಯ ಗುನ್ನೆಯಲ್ಲಿ ಬಳಸಿದ ಬಗ್ಗೆ (ನಿ.ಪಿ– 1ರಿಂದ ನಿ.ಪಿ–4) ಹಾಜರುಪಡಿಸಲಾಗಿದೆ. ಇದೂ ಅಲ್ಲದೇ ಸರ್ಕಾರ ಪರ ಸಾಕ್ಷಿ ವಿಚಾರಣೆಯಲ್ಲಿ **ಪಿಡಬ್ಲು–1 ರಿಂದ ಪಿಡಬ್ಲು–4** ಇವರು ತಮ್ಮ ಸಾಕ್ಷದಲ್ಲಿ ನಿ.ಪಿ–1ಕ್ಕೆ ಸಹಿ ಹಾಕಿದ ಬಗ್ಗೆ ಮುಖ್ಯ ವಿಚಾರಣೆಯಲ್ಲಿ ಹಾಗೂ ತಮ್ಮ ಪಾಟೀ ಸವಾಲಿನ ಉತ್ತರದಲ್ಲಿ ಹೇಳಿದ್ದು ಇದರಿಂದ ಕೆಎ–30/ಕೆ–7852 ದ್ವಿಚಕ್ರ ವಾಹನ ಹಿರೋಹೊಂಡಾ ಸ್ಪ್ಲೆಂಡರ್ ನಲ್ಲಿ ಸೀಸಂ ಕೈ ಚಿರಾವು ನಗಗಳು 2=0.112 ಘ.ಮೀ. ಅರಣ್ಯ ಕಳ್ಳ ಸಾಗಾಣಿಕೆಯ ಅಪರಾಧದಲ್ಲಿ ಬಳಸಿಕೊಂಡಿದ್ದು ಖಚಿತಪಡಿಸುತ್ತದೆ.

**ಅಂಶ ನಂ. (ಇ):**

ದಿನಾಂಕ: 24–01–2007 ರಂದು ವಲಯ ಅರಣ್ಯಾಧಿಕಾರಿ, ಅಂಕೋಲಾ ಇವರು ಈ ನ್ಯಾಯಾಲಯದ ಎದುರು ಹಾಜರುಪಡಿಸಿದ ವರದಿ ಹಾಗೂ ಅದರೊಂದಿಗೆ ಸಲ್ಲಿಸಿದ ಪ್ರಥಮ ಮಾಹಿತಿ ವರದಿ ಸಂಖ್ಯೆ: 21/2006–07 ಮತ್ತು ಪಂಚನಾಮೆಯನ್ನು **(ನಿ.ಪಿ–1 ರಿಂದ ನಿ.ಪಿ–4)** ಪರಿಶೀಲಿಸಲಾಗಿದೆ. ಹಾಗೂ ಪಿಡಬ್ಲ್ಯು–1 ರಿಂದ ಪಿಡಬ್ಲ್ಯು–4ರವರ ಸಾಕ್ಷ್ಯವನ್ನು ಪರಿಗಣಿಸಲಾಗಿ ಆರೋಪಿತ ಅರ್ಜಿದಾರ/ವಾಹನ ಮಾಲೀಕ ಸ್ವತ: ತನ್ನ ವಾಹನ ನೋಂದಣಿ ಸಂಖ್ಯೆ: ಕೆಎ–30/ಕೆ–7852 ದ್ವಿಚಕ್ರ ವಾಹನ ಹಿರೋಹೊಂಡಾ ಸ್ಪ್ಲೆಂಡರ್ ನೇದರಲ್ಲಿ ಅನಧಿಕೃತವಾಗಿ ಯಾವುದೇ ಪಾಸ್ ಯಾ ಫರ್ಮಿಟ್ ಅಥವಾ ತತ್ಸಂಬಂಧ ಯಾವುದೇ ಅಧಿಕೃತ ದಾಖಲೆ ಇಲ್ಲದೇ ಸೀಸಂ ಕೈಚಿರಾವು ನಗಗಳನ್ನು ಕಳ್ಳಸಾಗಾಣಿಕೆಯಿಂದ ಸಾಗಿಸುವಾಗ ಸಿಕ್ಕಿಬಿದ್ದಿರುತ್ತಾರೆ ಎಂಬುದು ಖಚಿತವಾಗುತ್ತದೆ. ಆದರೆ, ಸದರ ಅರ್ಜಿದಾರನಾಗಲಿ ಅಥವಾ ಅವರ ಪರ ವಕಾಲತ್‌ವಹಿಸಿದ ನ್ಯಾಯವಾದಿಗಳಾಗಲಿ ತಮ್ಮ ಹೇಳಿಕೆಯನ್ನು ಸಮರ್ಥಿಸಬಹುದಾದಂತಹ ಯಾವುದೇ ದಾಖಲೆ/ಸಾಕ್ಷಿ ಪುರಾವೆಗಳನ್ನು ಒದಗಿಸುವಲ್ಲಿ ವಿಫಲರಾಗಿದ್ದಾರೆ. ಆದ್ದರಿಂದ ಫಿರ್ಯಾದುದಾರರು ಒದಗಿಸಿದ ದಾಖಲೆಗಳು ಅಂದರೆ ಪ್ರಥಮ ಮಾಹಿತಿ ವರದಿ, ಪಂಚನಾಮೆ ಹಾಗೂ ಸಾಕ್ಷಿ ಹೇಳಿಕೆಗಳನ್ನು ಅಧಿಕೃತವೆಂದು ಪರಿಗಣಿಸಲಾಗಿದೆ.

ಪ್ರಸ್ತುತ ಪ್ರಕರಣದಲ್ಲಿ ವಾಹನ ಮಾಲೀಕರೇ ಸ್ವತ: ತಮ್ಮ ಸ್ವಂತ ವಾಹನ ನೋಂದಣಿ ಸಂಖ್ಯೆ: ಕೆಎ–30/ಕೆ–7852 ದ್ವಿಚಕ್ರ ವಾಹನ ಹಿರೋಹೊಂಡಾ ಸ್ಪ್ಲೆಂಡರ್ ನೇದರಲ್ಲಿ ಅನಧಿಕೃತವಾಗಿ ಪಾಸ್ ಯಾ ಫರ್ಮಿಟ್ ಇಲ್ಲದೇ ಮತ್ತು ಇಲಾಖೆಯ ಯಾವುದೇ ಛಪ್ಪಾ ಮೊಹರ್ ಇಲ್ಲದ ಸೀಸಂ ತುಂಡುಗಳನ್ನು ಕಳ್ಳಸಾಗಾಣಿಕೆ ಮಾಡುವಾಗ ಸಿಕ್ಕಿಬಿದ್ದಿರುತ್ತಾರೆ. ಇಲ್ಲಿ ಅಪರಾಧಿಯೇ ಸ್ವತ: ವಾಹನದ ಮಾಲೀಕ ಮತ್ತು ಅರ್ಜಿದಾರ ಆಗಿದ್ದಾರೆ ಎನ್ನುವದು ದೃಢಪಟ್ಟಿದೆ. ಪಿಡಬ್ಲ್ಯು–1 ರಿಂದ ಪಿಡಬ್ಲ್ಯು–4 ರ ವರೆಗೆ ಮಾಡಿದ ಪಾಟೀ ಸವಾಲಿನ ಉತ್ತರಗಳನ್ನು ಪರಿಶೀಲನೆಗೆ ತೆಗೆದುಕೊಂಡಾಗ, ಪಿಡಬ್ಲ್ಯು–1 ರಿಂದ ಪಿಡಬ್ಲ್ಯು–4 ರವರು ತಮ್ಮ ಮುಖ್ಯ ವಿಚಾರಣೆಯಲ್ಲಿ ಹೇಳಿದ ವಿಷಯಗಳನ್ನು ಅಲ್ಲಗಳೆಯುವಂತಹ ಯಾವುದೇ ಉತ್ತರ ನೀಡಿದ್ದು ಇರುವದಿಲ್ಲ.

**ಅಂಶ ನಂ. (ಈ):**

ಈ ಪ್ರಕರಣದಲ್ಲಿ ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರು ಈ ಪ್ರಕರಣದ ಗುನ್ನೆ ದಾಖಲಿಸಿದ ಹಾಗೂ ಸಾಕ್ಷಿಗಳ ವಿಚಾರಣೆಯಿಂದ ಹೇಳಿಕೆಯನ್ನು ದಾಖಲು ಮಾಡಿಕೊಳ್ಳಲಾಗಿದ್ದು, ಸದರ ಅರ್ಜಿದಾರನಾಗಲಿ ಅಥವಾ ಅವರ ಪರ ವಕಾಲತ್‌ವಹಿಸಿದ ನ್ಯಾಯವಾದಿಗಳಾಗಲಿ ತಮ್ಮ ಹೇಳಿಕೆಯನ್ನು ಸಮರ್ಥಿಸಬಹುದಾದಂತಹ ಯಾವುದೇ ದಾಖಲೆ/ಸಾಕ್ಷಿ ಪುರಾವೆಗಳನ್ನು ಒದಗಿಸುವಲ್ಲಿ ವಿಫಲರಾಗಿದ್ದಾರೆ. ಮುಂದುವರಿದು ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ವಾದ ಪುಷ್ಟೀಕರಿಸಲು ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು 2009 (I) Crime Page 25 ಇದನ್ನು ನೀಡಿರುತ್ತಾರೆ ಮತ್ತು ಸಹಾಯಕ ಅಭಿಯೋಗ ನಿರ್ದೇಶಕರು ಹಾಜರುಪಡಿಸಿದ ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು ನೋಡಲಾಗಿ ಯಾವುದೇ ವಾಹನವು ಅರಣ್ಯ ಉತ್ಪನ್ನಗಳ ಅನಧಿಕೃತ ಸಾಗಾಟ ಮಾಡಲು ಬಳಸಿದ್ದಲ್ಲಿ ಅದು Deforestation ಆಗಲು ಕಾರಣವಾಗುತ್ತದೆ ಎಂದು ಭಾವಿಸಬೇಕು ಹಾಗೂ ಇದು ನೈಸರ್ಗಿಕ ಅಸಮತೋಲನಕ್ಕೆ ಕಾರಣವಾಗುತ್ತದೆ. ಅರಣ್ಯ ಕಾಪಾಡುವದು ಇಲಾಖೆಯ ಕರ್ತವ್ಯವಾಗಿದ್ದು ಅನಧಿಕೃತವಾಗಿ ವಾಹನವನ್ನು ಮರಗಳ ಸಾಗಾಟಕ್ಕೆ ಬಳಸಿದರೆ ಬಹಿರಂಗ ಹರಾಜು ಮಾಡಬಹುದೆಂದು ಆದೇಶ ಮಾಡಿದ್ದು ಇರುತ್ತದೆ. ಆದ್ದರಿಂದ ಪರ ಹಾಗೂ ಅರ್ಜಿದಾರರ ಪರ ದಾಖಲೆಗಳನ್ನು, ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಲಾಗಿ, ವಾಹನ ನೋಂದಣಿ ಸಂಖ್ಯೆ: ಕೆಎ–30/ಕೆ–7852 ದ್ವಿಚಕ್ರ ವಾಹನ ಹಿರೋಹೊಂಡಾ ಸ್ಪ್ಲೆಂಡರ್ ಇದು ದಿನಾಂಕ: 24–01–2007 ರಂದು ಪ್ರಥಮ ಮಾಹಿತಿ ಸಂಖ್ಯೆ: 21/2006–07, ದಿನಾಂಕ: 24–01–2007 ರನ್ವಯ ದಾಖಲಾದ ಗುನ್ನೆಯಲ್ಲಿ ಅನಧಿಕೃತವಾಗಿ ಸೀಸಂ ಕೈ ಚಿರಾವು ನಗಗಳು 2=0.112 ಘ.ಮೀ. ಕಳ್ಳ ಸಾಗಾಣಿಕೆ ಮಾಡುವಲ್ಲಿ ತೊಡಗಿಸಿಕೊಂಡಿದ್ದು ದೃಢಪಟ್ಟಿರುವದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ)ರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬೇಕೆನ್ನುವ ಅಂಶವು ಮನದಟ್ಟಾಗಿದೆ.

ಆದ್ದರಿಂದ ಈ ಕೆಳಗಿನಂತೆ ಆದೇಶ:

**ಆದೇಶ**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ ಟಿ.ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಆದ ನಾನು ಈ ಮೂಲಕ ಆದೇಶಿಸುವದೇನೆಂದರೆ ಈ ಗುನ್ನೆ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963ರ ಅನುಚ್ಛೇದ 71 (ಎ) ಈ ತಾರೀಖಿನ ವರೆಗೆ ಆದ ತಿದ್ದುಪಡಿ ಪ್ರಕಾರ ಹಿರೋಹೊಂಡಾ ಸ್ಪ್ಲೆಂಡರ್ ದ್ವಿಚಕ್ರ ವಾಹನಸಂಖ್ಯೆ: KA-30/K-7852 ಮತ್ತು ಅದರಲ್ಲಿದ್ದ ಸೀಸಂ ಕೈಚಿರಾವು ನಗಗಳು 2=0.112 ಘ.ಮೀ. ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

**ವಾಹನದ ವಿವರ:**

| | | | |
|---|---|---|---|
| 1) | ನೋಂದಣಿ ಸಂಖ್ಯೆ | : | KA-30/K-7852 |
| 2) | ಇಂಜಿನ್ ನಂಬರ | : | D4E15M27708 |
| 3) | ಚಾಸಿ ನಂಬರ | : | 04E16C35153 |
| 4) | ವಾಹನದ ಮಾದರಿ | : | ಹಿರೋಹೊಂಡಾ ಸ್ಪ್ಲೆಂಡರ್ (ಎರಡು ಗಾಲಿ) |

ಈ ಆದೇಶವನ್ನು ಹೊರಡಿಸಿದ 30 ದಿನಗಳ ಅವಧಿಯಲ್ಲಿ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ಈ ಹೊತ್ತಿನ ದಿನಾಂಕ: 13–02–2015 ರಂದು ಈ ನ್ಯಾಯಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

(**Certified Copy**)

**ಟಿ.ಹೀರಾಲಾಲ್, ಭಾ.ಅ.ಸೇ.**
ಅಧಿಕಾರಿಯುತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಕಾರವಾರ ವಿಭಾಗ, ಕಾರವಾರ.

**PR. 325**
**SC. 05**

**ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಇವರ ನ್ಯಾಯಾಲಯ**

**ಕ್ರ.ಸಂ:ಎ1/ಎಫ್ಓಸಿ/ವಿವ–1/2011–12, ಕಾರವಾರ, ದಿನಾಂಕ: 13–02–2015.**

**ಉಪಸ್ಥಿತರು:** ಶ್ರೀ. ಟಿ. ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ
ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

**ಫಿರ್ಯಾದುದಾರರು:** ವಲಯ ಅರಣ್ಯಾಧಿಕಾರಿ,
ರಾಮನಗುಳಿ ವಲಯ
ರಾಮನಗುಳಿ
(ಸರ್ಕಾರದ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಉ.ಕನ್ನಡ ಕಾರವಾರ)

**ವಿರುದ್ಧ**

**ಅರ್ಜಿದಾರರು:** ಅಪ್ಪಣ್ಣಾ ಭೈರಪ್ಪ ನಾಯ್ಕ
ಸಾ: ಮಾವಳ್ಳಿ, ಮುರ್ಡೇಶ್ವರ,
ತಾಲೂಕು: ಭಟ್ಕಳ
ಜಿಲ್ಲೆ: ಉತ್ತರಕನ್ನಡ.
(ಅರ್ಜಿದಾರರ ಪರವಾಗಿ ಶ್ರೀ. ಎನ್.ಎಸ್.ಭಟ್ಟ ವಕೀಲರು)

**ಪ್ರಸ್ತಾವನೆ:**

1. ದಿನಾಂಕ: 29–04–2011 ರಂದು ರಾತ್ರಿ ವೇಳೆಯಲ್ಲಿ ಗಸ್ತಿನಲ್ಲಿರುವ ಸಂದರ್ಭದಲ್ಲಿ ಸುಮಾರು ರಾತ್ರಿ 3.45 ಘಂಟೆಯ ಸಮಯಕ್ಕೆ ರಾಮನಗುಳಿ ವಲಯ ಕಚೇರಿಗೆ ಬಾತ್ಮಿ ಬಂದ ಮೇರೆಗೆ ವಲಯ ಕಚೇರಿಯ ವೈರ್‌ಲೆಸ್ ಡ್ಯೂಟಿಯ ಮೇಲೆ ಇದ್ದ ಸಿಬ್ಬಂದಿಯು ರಾತ್ರಿ ಗಸ್ತು ಕರ್ತವ್ಯದಲ್ಲಿರುವ ಶ್ರೀ ಲಕ್ಷ್ಮಣ ಖೀರು, ಅರಣ್ಯ ರಕ್ಷಕ ಇವರ ವ್ಹಾಕಿಟಾಕಿಗೆ ಕೊಡ್ಲಗದ್ದಾ ಗಸ್ತಿನ ದುಗ್ಗನಬೈಲ್ ಅರಣ್ಯದ ಒಳಗಡೆ ಟಾಟಾಮೊಬೈಲ್ ವಾಹನ ಸಂಖ್ಯೆ:ಕೆಎ–47/261 ವಾಹನ ಹೋಗಿದ್ದು ಆ ಸ್ಥಳದ ರಸ್ತೆಯ ಬದಿಯಲ್ಲಿ ಪಲ್ಸರ್ ವಾಹನ ನಿಂತಿರುವ ಬಗ್ಗೆ ಸ್ಥಳ ಪರಿಶೀಲನೆ ಮಾಡಲು ಬಂದ ಬಾತ್ಮಿಯ ಮೇರೆಗೆ ರಾತ್ರಿ ಗಸ್ತಿನಲ್ಲಿರುವ ಸಿಬ್ಬಂದಿಗಳು ಕಾರ್ಯಪ್ರವೃತ್ತರಾಗಿ ವಜ್ರಳ್ಳಿಯ ಕಡೆಗೆ ಹೊರಟು ಮುಂದುವರೆದು, ದುಗ್ಗನಬೈಲ್ ಬರುವಷ್ಟರಲ್ಲಿ ಪಲ್ಸರ್ ಕರಿ ಬಣ್ಣದ ದ್ವಿಚಕ್ರ ವಾಹನ ಸಂಖ್ಯೆ: ಕೆಎ–47/1293 ಇದರ ಹಿಂದೆ ಟಾಟಾ ಮೊಬೈಲ್ ವಾಹನವು ನಮ್ಮನ್ನು ದಾಟಿ ಹೋದದನ್ನು ಖಾತ್ರಿಪಡಿಸಿಕೊಂಡು ಬೆನ್ನಟ್ಟಿ ಹೋಗಿ ನೋಡಲಾಗಿ, ಪಲ್ಸರ್ ವಾಹನದ ಮೇಲೆ ಇದ್ದವರು ರಾಜೇಶ ಗಣಪತಿ ಗಾಂವಕರ, ಸಾ: ವಜ್ರಳ್ಳಿ ಎಂದು ಗುರುತಿಸಿದೆವು. ಸದರ ಟಾಟಾ ಮೊಬೈಲ್ ವಾಹನದ ಹಿಂಭಾಗದಲ್ಲಿ ಬಾಳೇಕಾಯಿ ತುಂಬಿದನ್ನು ಕಂಡು ಮುಂದುವರೆದು ಬಾತ್ಮಿ ನೀಡಿದ ಸ್ಥಳ ಕೊಡ್ಲಗದ್ದಾ ಬ್ಲಾಕ್–24–9ನ್ನು ಪರಿಶೀಲಿಸಲಾಗಿ ಅದು ರಾಷ್ಟ್ರೀಯ ಹೆದ್ದಾರಿ 63 ರ ಬದಿಯಲ್ಲಿದ್ದ ಗಟಾರವನ್ನು ಮುಚ್ಚಿ ಹೊಸದಾಗಿ ಅಕೇಶಿಯಾ ನೆಡುತೋಪಿನಲ್ಲಿ ರಸ್ತೆ ಮಾಡಿದ್ದನ್ನು ಕಂಡು ನಮ್ಮ ವಾಹನವನ್ನು ನಿಲ್ಲಿಸಿ ದಾರಿಯನ್ನು ನೋಡಲಾಗಿ, ಆ ದಾರಿಯಲ್ಲಿ ನಾಲ್ಕು ಚಕ್ರದ ಸಿಂಗಲ್ ಟಾಯರಿನ ಗುರುತನ್ನು ನೋಡಿ ಚಾರ್ಜಿಂಗ್ ಬ್ಯಾಟರಿಯ ಸಹಾಯದಿಂದ ಮೇಲೆ ಗುಡ್ಡದಲ್ಲಿ ತಿರುಗಾಡಿ ನೋಡಲಾಗಿ ಅಲ್ಲಲ್ಲಿ 5 ಸಾಗ ಮರಗಳನ್ನು ಗರಗಸದಿಂದ ಕಟಾವು ಮಾಡಿ, ಬುಡದಲ್ಲಿಯ ಒಳ್ಳೆಯ ತುಂಡುಗಳನ್ನು ಮಾತ್ರ ರಸ್ತೆ ಮಾಡಿದ ಸ್ಥಳಕ್ಕೆ ಸಂಗ್ರಹಿಸಿ ಕಳ್ಳ ಸಾಗಾಣಿಕೆ ಮಾಡಿರುವ ಬಗ್ಗೆ ಅಲ್ಲಿ ಬಿದ್ದಿರುವ ಬಾಳೆಯ ಎಲೆಯನ್ನು ಗಮನಿಸಿ ಸದರ ಬಾಳೇಕಾಯಿ ತುಂಬಿಕೊಂಡ ವಾಹನದಲ್ಲಿಯೇ ತುಂಡು ಸಾಗಿಸಿದ್ದನ್ನು ಖಚಿತಪಡಿಸಿಕೊಂಡೆವು. ನಂತರ ಒಂದೊಂದು ಮರದಿಂದ ಎಷ್ಟು ತುಂಡು ಮಾಡಿರುವದೆಂಬುದನ್ನು ನೆಲದ ಮೇಲೆ ಬಿದ್ದ ಕಟ್ಟಿಗೆ ಪುಡಿಯ ಆಧಾರದ ಮೇಲೆ ಎಣಿಕೆ ಮಾಡಲಾಗಿ ಅವು ಒಟ್ಟೂ 14 ತುಂಡುಗಳಿದ್ದವು. ನಂತರ ಶಾಖಾ ವನಪಾಲಕ, ರಾಮನಗುಳಿಯವರ ಹೇಳಿಕೆಯಂತೆ ಶ್ರೀ. ಲಕ್ಷ್ಮಣ ಖೀರು ಅರಣ್ಯ ರಕ್ಷಕ ಕೊಡ್ಲಗದ್ದಾ (ಪ್ರಭಾರ) ಇವರು ಎಲ್ಲಾ ಬುಡಗಳ ಅಳತೆ ಮಾಡಿ ಅವುಗಳಿಗೆ ಅನಂ. ಹಾಗೂ ಟಿ ನಿಶಾನೆ ಗುರುತು ಹಾಕಿದ್ದು ಇರುತ್ತದೆ. ಈ ಮೇಲಿನಂತೆ ತಯಾರಿಸಲಾದ 14 ತುಂಡುಗಳನ್ನು ರಾಜೇಶ ಗಣಪತಿ ಗಾಂವಕರ, ಪಲ್ಸರ್ ಬೈಕ್ ವಾಹನ ಸಂಖ್ಯೆ: ಕೆಎ–47/1293ನೇಯವರ ದೇಖರೇಖೆಯಲ್ಲಿ ಟಾಟಾಮೊಬೈಲ್ ನಲ್ಲಿ ಸಾಗಿಸಿದ್ದನ್ನು ಖಾತ್ರಿ ಪಡಿಸಿಕೊಂಡು ಸದರ ಪಂಚನಾಮೆಯನ್ನು ಇಲಾಖಾ ಪಂಚರ ಸಮಕ್ಷಮ ಬೆಳಗ್ಗಿನಜಾವಾ 4.30 ಘಂಟೆಗೆ ಕತ್ತಲು ಇರುವದರಿಂದ ಚಾರ್ಜ ಬ್ಯಾಟರಿ ಬೆಳಕಿನ ಸಹಾಯದಿಂದ ಬರೆದು ಬೆಳಿಗ್ಗೆ 6.00 ಘಂಟೆಯ ಸಮಯಕ್ಕೆ ಮುಗಿಸಿದ್ದು ಇರುತ್ತದೆ. ನಂತರ ಅದೇ ದಿವಸ ಬೆಳಗ್ಗಿನ ಜಾವ 4.30 ಘಂಟೆಗೆ ಗುನ್ಹೆ ಸಂಭವಿಸಿದ 5 ಸಾಗವಾನಿ ಮರಗಳ ಪುರವಣಿ ಪಂಚನಾಮೆ ಮಾಡಲಾಗಿ ಸದರ 5 ಮರಗಳಿಂದ ಹೊರಟ ಮ್ಹಾಲು 18=0.860 ಘ.ಮೀ. ಇದ್ದದ್ದನ್ನು ವನಪಾಲಕ, ರಾಮನಗುಳಿ ಇವರು ಅರಣ್ಯ ವೀಕ್ಷಕರ ಸಹಾಯದಿಂದ ಅಳತೆ ಮಾಡಿದರು. ನಂತರ 18 ನಗಗಳಿಗು ಟೀ ನಿಶಾನೆ ಹಾಕಿ ಭದ್ರತೆಯ ಸಲುವಾಗಿ ರಾಮನಗುಳಿ ನಾಕಾ ಕಂಪೌಂಡಿಗೆ ಟ್ರಾಕ್ಟರ್ ಮೂಲಕ ತರುವ ವ್ಯವಸ್ಥೆ ಮಾಡಲಾಯಿತು. ಸದರ ಪಂಚನಾಮೆಯನ್ನು ಬೆಳಿಗ್ಗೆ 10.00 ಘಂಟೆಗೆ ಪ್ರಾರಂಭಿಸಿ 11.30 ಗಂಟೆಗೆ ಇಲಾಖಾ ಪಂಚರ ಸಮಕ್ಷಮ ಬರೆಯಿಸಿದ್ದು ಇರುತ್ತದೆ. ಸದರ ಸಾಗ ಮರಗಳನ್ನು ಕಡಿದು ತುಂಡು ಮಾಡಿ ಟಾಟಾ ಮೊಬೈಲ್ ವಾಹನದಲ್ಲಿ ಸಾಗಾಟ ಮಾಡಲು ಬಳಸಿಕೊಂಡ ವಾಹನವನ್ನು ರಾಣೆಬೆನ್ನೂರು ಪೋಲಿಸರು ವಶಪಡಿಸಿಕೊಂಡ ಬಗ್ಗೆ ಮೇಲಾಧಿಕಾರಿಗಳಿಂದ ಮಾಹಿತಿ ಬಂದಿರುತ್ತದೆ. ಅಲ್ಲದೇ ಗುನ್ಹೆಯಲ್ಲಿ ಜಪ್ತ ಮಾಡಿದ ಪಲ್ಸರ್ ಬೈಕ್ ವಾಹನ ಸಂಖ್ಯೆ: ಕೆಎ–47/1293 ಅನಧಿಕೃತವಾಗಿ ಕಟ್ಟಿಗೆ ಸಾಗಿಸುತ್ತಿರುವ ಬಗ್ಗೆ ದೃಢಪಟ್ಟಿಕೊಂಡು ಅರಣ್ಯ ರಕ್ಷಕ ವೈದ್ಯಹೆಗ್ಗಾರ ಪ್ರಭಾರಿ ಕೊಡ್ಲಗದ್ದಾ ಬೀಟ ಇವರು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 62, 81ಎ, 80 ಮತ್ತು 104ಎ ಪ್ರಕಾರ ಪ್ರಥಮ ಮಾಹಿತಿ ವರದಿ ಸಂಖ್ಯೆ: 01/2011–12, ದಿನಾಂಕ: 29.04.2011 ರ ಪ್ರಕಾರ ಅರಣ್ಯ ಮೊಕದ್ದಮೆ ದಾಖಲಿಸಿಕೊಂಡು ಸದರ ಗುನ್ಹೆಗೆ ಬಳಸಿದ ಪಲ್ಸರ್ ಬೈಕ್ ವಾಹನ ಸಂಖ್ಯೆ: ಕೆಎ–47/1293 ದ್ವಿಚಕ್ರ ವಾಹನವನ್ನು ವಲಯ ಅರಣ್ಯಾಧಿಕಾರಿ, ರಾಮನಗುಳಿ ಇವರು ದಿನಾಂಕ: 02–05–2011 ರಂದು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುತ್ತಾರೆ. ಸದರ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಈ ಪ್ರಾಧಿಕಾರದ ಆದೇಶ ದಿನಾಂಕ 05–05–2011 ರಂದು ಸದರ ಜಪ್ತಪಡಿಸಿದ ವಾಹನ ವನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಕಾರವಾರ ಇವರ ತಾಬಾದಲ್ಲಿ ವಹಿಸಿಕೊಡಲಾಯಿತು.

2. ಸದರ ಜಪ್ತ ವಾಹನದ ಮಾಲೀಕತ್ವದ ಕುರಿತು ಈ ನ್ಯಾಯಾಲಯದಿಂದ ದಿನಾಂಕ: 20–08–2013, ರಂದು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಹೊನ್ನಾವರ ಇವರಿಗೆ ಪತ್ರ ಬರೆಯಲಾಗಿ ಅವರು ದಿನಾಂಕ: 26–08–2013 ರಂದು B Sheet ವರದಿ ನೀಡಲಾಗಿ ಸದರ ದ್ವಿಚಕ್ರ ವಾಹನವು ಶ್ರೀ. ಅಣ್ಣಪ್ಪಾ ಭೈರಪ್ಪಾ ನಾಯ್ಕ ಸಾ: ಮಾವಳ್ಳಿ, ಮುರ್ಡೇಶ್ವರ, ತಾ: ಭಟ್ಕಳ ಇವರು ಮಾಲೀಕರಾಗಿರುವ ಬಗ್ಗೆ ವರದಿಯನ್ನು ನೀಡಿರುತ್ತಾರೆ.

3. ಈ ಪ್ರಕರಣದ ವಿಚಾರಣೆಗಾಗಿ ವಾಹನ ಮಾಲೀಕರಿಗೆ ಈ ನ್ಯಾಯಾಲಯದಿಂದ ದಿನಾಂಕ: 18–07–2014, 05–09–2014, 31–10–2014, 14–11–2014, 28–11–2014, 05–12–2014 ಮತ್ತು 23–01–2015 ರಂದು ಹಾಜರಾಗಲು ವಾಹನದ ಮಾಲೀಕರಿಗೆ ಮತ್ತು ಅವರ ಪರ ವಕಾಲತ್ ವಹಿಸಿದ ನ್ಯಾಯವಾದಿಗಳಿಗೂ ನೋಟೀಸು ಜಾರಿ ಮಾಡಿದ್ದು ಇರುತ್ತದೆ ಆದರೆ ಅರ್ಜಿದಾರರಾಗಲೀ ಅವರ ಪರ ವಾದಿಸಲು ವಕಾಲತ್ ಅರ್ಜಿ ಸಲ್ಲಿಸಲಾದ ನ್ಯಾಯವಾದಿಗಳು ವಿಚಾರಣೆ ಕಾಲಕ್ಕೆ ಹಾಜರಾಗಿದ್ದು ಇರುವದಿಲ್ಲ.

4. ಜಪ್ತುಪಡಿಸಿದ ವಾಹನದ ಬಗ್ಗೆ ಮುಂದಿನ ಆದೇಶಕ್ಕಾಗಿ ಪ್ರಕರಣವನ್ನು ವಿಚಾರಣೆಗಾಗಿ ಕೈಗೆತ್ತಿಕೊಳ್ಳಲಾಯಿತು. ಅರ್ಜಿದಾರರು ಹಾಗೂ ಪರ ವಕೀಲರು ಸಾಕ್ಷಿ ವಿಚಾರಣೆ ಕಾಲಕ್ಕೆ ಹಾಜರಾಗಿದ್ದು ಇರುವದಿಲ್ಲ. ಹಾಗೂ ಎದುರುದಾರರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ವಿಚಾರಣೆಗೆ ಹಾಜರು ಆಗಿರುತ್ತಾರೆ. ಫಿರ್ಯಾದುದಾರ/ಎದುರುದಾರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಪಿಡಬ್ಲು–1 ರಿಂದ ಪಿಡಬ್ಲು–3 ರವರನ್ನು ವಿಚಾರಿಸಿರುತ್ತಾರೆ.

| | | |
|---|---|---|
| ಪಿಡಬ್ಲು–1 | : | ಶ್ರೀ. ಲಕ್ಷ್ಮಣ ಖೀರು , ಅರಣ್ಯ ರಕ್ಷಕ, ವೈದ್ಯಹೆಗ್ಗಾರ, ರಾಮನಗುಳಿ ವಲಯ |
| ಪಿಡಬ್ಲು–2 | : | ಶ್ರೀ. ಸಂತೋಷ ಫಕೀರಪ್ಪ ಕರಚಕಟ್ಟಿ, ಅರಣ್ಯರಕ್ಷಕ, ಶೇವಕಾರ ಗಸ್ತು, ರಾಮನಗುಳಿ ವಲಯ |
| ಪಿಡಬ್ಲು–3 | : | ಶ್ರೀ. ಎಸ್.ಓ. ದಿನೇಶ, ವಲಯ ಅರಣ್ಯಾಧಿಕಾರಿ, ರಾಮನಗುಳಿ |

ನಿಶಾನೆ ಪಿ–1 ರಿಂದ ಪಿ–6 ನ್ನು ಹಾಜರುಪಡಿಸಿರುತ್ತಾರೆ.

| | | |
|---|---|---|
| ನಿಶಾನೆ ಪಿ–1 | : | ಪಂಚನಾಮೆ |
| ನಿಶಾನೆ ಪಿ–2 | : | ಪುರವಣಿ ಪಂಚನಾಮೆ |
| ನಿಶಾನೆ ಪಿ–3 | : | ಪ್ರಥಮ ಮಾಹಿತಿ ವರದಿ |
| ನಿಶಾನೆ ಪಿ–4 | : | ವಾಹನದ ಛಾಯಾ ಚಿತ್ರ |
| ನಿಶಾನೆ ಪಿ–5 | : | ಸೀಜರ್ ರಿಪೋರ್ಟ |
| ನಿಶಾನೆ ಪಿ–6 | : | ವಿಚಾರಣಾ ವರದಿ |

5. ಹಾಜರುಪಡಿಸಿದ ಎಲ್ಲಾ ಲಿಖಿತ ದಾಖಲೆಗಳು ಮತ್ತು ಹೇಳಿಕೆಗಳನ್ನು ಆಲಿಸಿ, ಪರಿಶೀಲಿಸಿದ ನಂತರ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ.

ಅ) ಈ ಪ್ರಕರಣದಲ್ಲಿ ಕಾಯ್ದಿಟ್ಟ ಅರಣ್ಯ ಪ್ರದೇಶದಲ್ಲಿರುವ ಸಾಗವಾನಿ ಮರಗಳನ್ನು ಅನಧಿಕೃತವಾಗಿ ಕಡಿದು ಪಾಸ್ ಯಾ ಪರ್ಮಿಟ್ ಇಲ್ಲದೆ ಸಾಗಿಸುತ್ತಿದ್ದ ಬಗ್ಗೆ ಗುನ್ಹೆ ದಾಖಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಆ) ಈ ಪ್ರಕರಣದಲ್ಲಿ ಸಾಗವಾನಿ ಮರಗಳನ್ನು ಕಡಿದು ಕಳ್ಳ ಸಾಗಾಣಿಕೆ ಮಾಡುವಲ್ಲಿ ಪಲ್ಸರ್ ಬೈಕ್ ವಾಹನ ಸಂಖ್ಯೆ: ಕೆಎ–47/1293 ಉಪಯೋಗ ಮಾಡಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಈ) ಈ ವಾಹನವನ್ನು ಅರಣ್ಯ ಕಾಯಿದೆ 71ಎ ನಿಯಮದಡಿ ಮುಟ್ಟುಗೋಲು ಹಾಕಿಕೊಳ್ಳಬಹುದೇ?

**ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.**

ಅಂಶ ನಂ. (ಅ) –– ಹೌದು

ಅಂಶ ನಂ. (ಆ) –– ಹೌದು

ಅಂಶ ನಂ. (ಈ) –– ಹೌದು

ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ವಿವರಿಸುತ್ತೇನೆ.

**ವಿಚಾರಣೆ ಕಾಲಕ್ಕೆ ನೀಡಲಾದ ಹೇಳಿಕೆಗಳು:**

**ಅಂಶ ನಂ (ಅ):**

**ಪಿ.ಡಬ್ಲು–1** ನಾನು ಕಳೆದ 2009 ಮಾರ್ಚನಿಂದ ವೈದ್ಯಹೆಗ್ಗಾರದಲ್ಲಿ ಅರಣ್ಯ ರಕ್ಷಕ ಎಂತಾ ಕೆಲಸ ಮಾಡುತ್ತಿದ್ದೆ. ಗುನ್ಹೆ ನಡೆದ ಸಮಯಕ್ಕೆ ನಾನು ಕೊಡ್ಲಗದ್ದಾ ಬೀಟಿಗೆ ಪ್ರಭಾರಿಯಾಗಿ ಕೆಲಸ ಮಾಡುತ್ತಿದ್ದೆ. ದಿನಾಂಕ: 28–04–2011ಕ್ಕೆ ನಾನು ಉಮೇಶ ಡಿ. ನಾಯ್ಕ, ಶಾಖಾ ವನಪಾಲಕ, ಸಂತೋಷ ಕರಚಕಟಿ, ಅರಣ್ಯ ರಕ್ಷಕ ಹಾಗೂ ಗಫಾರ ಸಾಬ್ ಅರಣ್ಯ ವೀಕ್ಷಕ ಇವರ ಜೊತೆ ರಾತ್ರಿ ಗಸ್ತು ಕರ್ತವ್ಯಕ್ಕೆ ಹೋಗಿದ್ದೆವು ಈ ರೀತಿ ಗಸ್ತು ತಿರುಗಲು ಹೋದಾಗ ನಮ್ಮ ಜೊತೆ ವಾಕಿಟಾಕಿ ತೆಗೆದುಕೊಂಡು ಹೋಗಿದ್ದೆವು. ನಾವು ಕೊಡ್ಲಗದ್ದಾ ಬೀಟಿನ ಹೊಸಕೊಪ್ಪಾ ಕ್ಯಾಂಪಿನ ಬಳಿ ಹೋದಾಗ ಅಲ್ಲಿ ದುಗ್ಗನ ಬೈಲ್ ಹತ್ತಿರ ಒಂದು ಟಾಟಾ ಮೊಬೈಲ್ ವಾಹನ ಸಂಖ್ಯೆ: ಕೆಎ–47/261 ವಾಹನವು ದುಗನಬೈಲ್ ಅರಣ್ಯದ ಒಳಗಡೆ ಹೋಗಿರುವದಾಗಿ ಹಾಗೂ ಆ ಸ್ಥಳದ ರಸ್ತ ಬದಿಯಲ್ಲಿ ಒಂದು ಪಲ್ಸರ ಬೈಕ್ ನಿಂತಿರುವದಾಗಿ ದಾರಿ ಹೋಕರು ತಿಳಿಸಿರುವದಾಗಿ ನಮ್ಮ ವಾಕಿಟಾಕಿಗೆ ವಲಯ ಕಚೇರಿಯಿಂದ ಮಾಹಿತಿ ಬಂದಿತು. ಸದರಿ ಪಲ್ಸರ ಗಾಡಿ ಪರಿಶೀಲಿಸಲು ನಾವು ವಜ್ರಳ್ಳಿಯ ಕಡೆಗೆ ಹೊರಟು ದುಗ್ಗನಬೈಲ್ ಪ್ರದೇಶಕ್ಕೆ ಬರುವಷ್ಟರಲ್ಲಿ ಪಲ್ಸರ್ ಕರಿಬಣ್ಣ ವಾಹನ ಸಂಖ್ಯೆ: ಕೆಎ–47/1293 ಹಾಗೂ ಅದರ ಹಿಂದೆ ಒಂದು ಟಾಟಾ ಮೊಬೈಲ್ ನಮ್ಮ ಮುಂದು ದಾಟಿ ಹೋಯಿತು. ಪಲ್ಸರ್ ವಾಹನದ ಮೇಲೆ ಇದ್ದವನು ರಾಜೇಶ ಗಾಂವಕರ ಎಂದು ನಾವು ಗುರುತಿಸಿದೆವು ಹಾಗೂ ಟಾಟಾ ಮೊಬೈಲ್ ನಲ್ಲಿ ಬಾಳೆಕಾಯಿ ತುಂಬಿರುವದು ಕಾಣಿಸಿತು ಬಾತ್ಮಿ ನಡೆದ ಸ್ಥಳವನ್ನು ಮುಟ್ಟಿ ಪರಿಶೀಲಿಸಲಾಗಿ, ರಾಷ್ಟ್ರೀಯ ಹೆದ್ದಾರಿ ಪಕ್ಕದಲ್ಲಿ ಗಟಾರ ಮುಚ್ಚಿ ಹೊಸದಾಗಿರುವ ಅಕೇಶಿಯಾ ನೆಡುತೋಪುನಲ್ಲಿ ರಸ್ತೆ ಮಾಡಿದನ್ನು ನೋಡಿದೆವು. ಹಾಗೂ ಅದೇ ದಾರಿಯಲ್ಲಿ ನಾಲ್ಕು ಚಕ್ರದ ಟಾಯರಿನ ಗುರ್ತು ನೋಡಿ ಮುಂದೆ ಹೋದೆವು. ನಮ್ಮಲ್ಲಿದ್ದ ಚಾರ್ಜಿಂಗ್ ಬ್ಯಾಟರಿ ಸಹಾಯದಿಂದ ನೋಡಲಾಗಿ 5 ಸಾಗಜಾತಿಯ

ಮರಗಳನ್ನು ಖರಗಸದಿಂದು ತುಂಡು ಮಾಡಿ ಒಳ್ಳೆಯ ತುಂಡುಗಳನ್ನು ಮಾತ್ರ ಹೊಸದಾಗಿ ರಸ್ತೆ ಮಾಡಿದ ಕಡೆಯಲ್ಲಿ ಸಂಗ್ರಹಿಸಿ ಸಾಗಾಣಿಕೆ ಮಾಡಿದ್ದು ಹಾಗೂ ಅಲ್ಲಿ ಬಿದ್ದ ಬಾಳೇಎಲೆಯ ಚೂರುಗಳನ್ನು ಮತ್ತು ಬಾಳೇಕಾಯಿ ನೋಡಿ ನಮ್ಮ ಮುಂದು ಹಾಯ್ದುಹೋದ ಟಾಟಾ ಮೊಬೈಲ್ ವಾಹನದಲ್ಲಿಯೇ ಮರದ ತುಂಡುಗಳನ್ನು ಮರದ ತುಂಡುಗಳನ್ನು ಸಾಗಾಟ ಮಾಡಿದ ಬಗ್ಗೆ ನಮಗೆ ಖಾತ್ರಿಯಾಯಿತು. ಶಾಖಾ ವನಪಾಲಕ, ರಾಮನಗುಳಿ ಇವರ ಹೇಳಿಕೆ ಮೇರೆಗೆ ಮರದ ಬುಡಚಿಗಳ ಅಳತೆ ಮಾಡಿದೆವು. ರಾಜೇಶ ಗಣಪತಿ ಗಾಂವಕರ ಈತನು ತನ್ನ ಪಲ್ಸರ ಬೈಕ್ ಕೆಎ–47/1293ನೇದನ್ನು ಈ ಕೃತ್ಯ ಮಾಡಲು ಉಪಯೋಗಿಸಿದ ಬಗ್ಗೆ ನಮಗೆ ಖಾತ್ರಿಯಾಯಿತು. ಈ ಬಗ್ಗೆ ಸ್ಥಳದಲ್ಲಿ ಒಂದು ಪಂಚನಾಮೆಯನ್ನು ನಾವು ಮಾಡಿದೆವು. ಸಾಕ್ಷಿ ನೋಡಿ ಗುರುತಿಸಿದ ಪಂಚನಾಮೆಯನ್ನು ಸಾಕ್ಷಿ ತಾನು ಬರೆದಿದ್ದೇನೆ ಎಂದು ಗುರುತಿಸಿದ್ದು ಅದನ್ನು ನಿ.ಪಿ–1 ಎಂದು ಸಾಕ್ಷಿ ಸಹಿಯನ್ನು ನಿ.ಪಿ–1ಎ ಎಂದು ಗುರುತಿಸಲಾಯಿತು. ನಂತರ ದಿನಾಂಕ: 01–05–2011 ರಂದು ನಾವು ರಾತ್ರಿ ಗಸ್ತಿಗೆ ಕರ್ತವ್ಯಕ್ಕೆ ಹೋಗಿದ್ದು ದಿನಾಂಕ: 2–5–2011 ರ ಬೆಳಿಗ್ಗೆ ಗಸ್ತು ಮುಗಿಸಿ ನಮ್ಮ ಸರ್ಕಾರಿ ವಾಹನ ಸಂಖ್ಯೆ: ಕೆಎ–01/ಜಿ–1235 ರ ಮೇಲೆ ಮರಳಿ ಬರುತ್ತಿರುವಾಗ ರಾಜೇಶ ಈತನು ಕೆಎ–47/1293 ಪಲ್ಸರ್ ವಾಹನದ ಮೇಲೆ ಹಿಂಬದಿಗೆ ಒಬ್ಬ ವ್ಯಕ್ತಿಯನ್ನು ಕುಳಿಸಿಕೊಂಡು ಹೋಗುತ್ತಿದ್ದವನು ನಮ್ಮನ್ನು ನೋಡಿ ವಾಪಸ್ ಹೋಗುತ್ತಿರುವದು ಕಂಡು ಬಂದಿತು. ಹಿಂದೆ ಕುಳಿತ ವ್ಯಕ್ತಿ ಚಂದ್ರಕಾಂತ ಗೌಡ ಆಗಿದ್ದು, ಆತನ ಕೈಯಲ್ಲಿ ಒಂದು ಗರಗಸ ಇತ್ತು. ಈ ವ್ಯಕ್ತಿಗಳು ನಾನು ಮೇಲೆ ಹೇಳಿದ ಗುನ್ನೆಗೆ ಸಂಬಂಧಿಸಿದಂತೆ ತಲೆಮರೆಸಿಕೊಂಡವರಾಗಿದ್ದರಿಂದ ನಾವು ನಮ್ಮ ವಾಹನದಲ್ಲಿ ದ್ವಿಚಕ್ರ ವಾಹನವನ್ನು ಬೆನ್ನಟ್ಟಿದೆವು. ಬೈಕ್ ಸವಾರನಾದ ರಾಜೇಶ ಗಾಂವಕರ ಇತನು ತನ್ನ ವಾಹನವನ್ನು ತನ್ನ ಮನೆಯ ಕಡೆಗೆ ಮುನ್ನೆಡೆಸಿ ವಾಹನವನ್ನು ಗಣಪತಿ ಥಾಕು ಗಾಂವಕರ ಈತನ ಮನೆಯ ಮುಂದೆ ನಿಲ್ಲಿಸಿರುತ್ತಾನೆ. ಹಾಗೂ ವಾಹನದ ಕೀಲಿ ಕೈಯನ್ನು ತೆಗೆದುಕೊಂಡು ಗಣಪತಿ ಥಾಕು ಗಾಂವಕರ ಈತನ ಮನೆಯ ಬೇಲಿಯ ಒಳಗಡೆ ಹೋಗಿರುತ್ತಾನೆ. ನಾವು ವಾಹನದಿಂದ ಕೆಳಗಿಳಿದು ಬೆನ್ನಟ್ಟಿರುತ್ತೇವೆ. ಅವರು ಬೇಲಿಯನ್ನು ಹಾರಿದಾಗ ರಾಜೇಶನ ಈತನ ಒಂದು ಮೊಬೈಲ್ ಫೋನ್ ಹಾಗೂ ಚಂದ್ರಕಾಂತ ಇತನ ಖರಗಸ ಬಿಟ್ಟು ಬೇಲಿ ಹಾರಿರುತ್ತಾರೆ. ನಾವು ಬೆನ್ನಟ್ಟಿದ್ದರೂ ನಂತರ ಅವರು ಅರಣ್ಯ ಕಡೆಗೆ ಓಡಿ ಹೋಗಿ ಮರೆಯಾಗಿರುತ್ತಾರೆ. ಮರಳಿ ನಾವು ಗಣಪತಿ ಗಾಂವಕರ ಇತನ ಮನೆಯ ಬೇಲಿಯ ಕಡೆಗೆ ಬಂದು ಚಂದ್ರಕಾತ ಈತನು ಎಸೆದು ಹೋದ ಗರಗಸ ರಾಜೇಶನು ಎಸೆದ ಮೊಬೈಲ್ ಹಾಗೂ ವಾಹನವನ್ನು ಪಂಚನಾಮೆ ಮಾಡಿ ಜಪ್ತ ಪಡಿಸಿಕೊಂಡೆವು. ಆ ಪಂಚನಾಮೆಯನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ತಾನೇ ಬರೆದಿರುತ್ತೇನೆ ಎಂದು ಹೇಳಿರುತ್ತಾರೆ ಸಾಕ್ಷಿ ಗುರುತಿಸಿದ ಪಂಚನಾಮೆಯನ್ನು ನಿ.ಪಿ– 2 ಎಂದು ಸಾಕ್ಷಿ ಸಹಿಯನ್ನು ನಿ.ಪಿ–2ಎ ಎಂದು ಗುರುತಿಸಲಾಯಿತು. ನಾವು ಜಪ್ತಪಡಿಸಿಕೊಂಡ ಪಲ್ಸರ್ ವಾಹನ ನಂಬರ ಕೆಎ–47/1293 ನೇದನ್ನು ರಾಜೇಶ ಗಾಂವಕರ ಈತನು ಅರಣ್ಯ ಮರಗಳನ್ನು ಕಡಿದು ತುಂಡು ಮಾಡಿ ಸಾಗಾಟ ಮಾಡಲು ಬಳಸಿಕೊಂಡಿರುತ್ತಾನೆ ನಾನು ನಿ.ಪಿ–1 ಪಂಚನಾಮೆಯಾದ ನಂತರ ಈ ಬಗ್ಗೆ ಪ್ರ.ವಾ ವರದಿಯನ್ನು ದಾಖಲಿಸಿಕೊಂಡಿರುತ್ತೇನೆ. ಸಾಕ್ಷಿ ಗುರುತಿಸಿದ ಪ್ರ.ವಾ ವರದಿಯನ್ನು ನಿ.ಪಿ–3 ಸಾಕ್ಷಿ ಸಹಿಯನ್ನು ನಿ.ಪಿ–3ಎ ಎಂದು ಗುರುತಿಸಲಾಯಿತು. ನಾನು ಜಪ್ತಪಡಿಸಿಕೊಂಡ ವಾಹನದ ಪೋಟೋವನ್ನು ನೋಡಿದಲ್ಲಿ ಗುರುತಿಸುತ್ತೇನೆ. ಸಾಕ್ಷಿ ನೋಡಿ ಗುರುತಿಸಿದ ವಾಹನದ ಫೋಟೋವನ್ನು ನಿ.ಪಿ–4 ಎಂದು ಗುರುತಿಸಲಾಯಿತು. ವಾಹನವು ಈಗ ಕಾರವಾರ ವಲಯ ಕಚೇರಿ ಆವರಣದಲ್ಲಿ ಇರುತ್ತದೆ. ನಿ.ಪಿ–2 ಪಂಚನಾಮೆಯಡಿ ಜಪ್ತಪಡಿಸಿಕೊಂಡ ಮ್ಹಾಲುಗಳ ಬಗ್ಗೆ ನಾನು ಜಪ್ತ ವರದಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿದ್ದು, ಅದನ್ನು ನೋಡಿದ್ದಲ್ಲಿ ಗುರುತಿಸುತ್ತೇನೆ. ಸಾಕ್ಷಿ ನೋಡಿ ಗುರುತಿಸಿದ ಜಪ್ತ ವರದಿಯನ್ನು ನಿ.ಪಿ–5 ಸಾಕ್ಷಿ ಸಹಿಯನ್ನು ನಿ.ಪಿ–5 ಎಂದು ಗುರುತಿಸಲಾಯಿತು. ನಾನು ಮೇಲೆ ಹೇಳಿದಂತಹ ಟಾಟಾ ಮೊಬೈಲ್ ವಾಹನವನ್ನು ರಾಣೆಬೆನ್ನೂರಿನಲ್ಲಿ ಹಿಡಿದ ಬಗ್ಗೆ ನನಗೆ ತನಿಖಾಧಿಕಾರಿಗಳಿಂದ ಮಾಹಿತಿ ದೊರಕಿದೆ. ಈ ಪ್ರಕರಣದಲ್ಲಿ ತನಿಖಾ ವರದಿಯನ್ನು ಮಾನ್ಯ ವಲಯ ಅರಣ್ಯಾಧಿಕಾರಿಗಳು ಸಲ್ಲಿಸಿರುತ್ತಾರೆ. ಅರಣ್ಯ ಮರಗಳ ಕಳ್ಳ ಸಾಗಾಣಿಕೆಗಾಗಿ ಈ ಮೇಲಿನ ವಾಹನವನ್ನು ಬಳಸಿಕೊಂಡಿದ್ದರಿಂದ ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಮಾನ್ಯ ನ್ಯಾಯಲಯಕ್ಕೆ ಅರಿಕೆ ಮಾಡಿಕೊಳ್ಳುತ್ತೇನೆ. ತನಿಖಾ ಕಾಲಕ್ಕೆ ಅರ್ಜಿದಾರರು ವಾಹನದ ಮಾಲೀಕರು ಎಂಬ ಮಾಹಿತಿ ನನಗೆ ನನ್ನ ಮೇಲಾಧಿಕಾರಿಗಳಿಂದ ತಿಳಿದು ಬಂದಿರುತ್ತದೆ. ಸದರ ಜಪ್ತಪಡಿಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ಪ್ರಾರ್ಥಿಸುತ್ತೇನೆ.

**ಪಾಟೀ ಸವಾಲು :**

ವಾಹನದ ಮಾಲೀಕರನ್ನು ಕರೆಯಲಾಗಿ ಅವರು ಹಾಜರಾಗಿದ್ದು ಇರುವದಿಲ್ಲ. ಕಾರಣ ಅರ್ಜಿದಾರರ ಪರ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

**ಪಿಡಬ್ಲು–2** ನಾನು 13–12–2010 ರಿಂದ ಅರಣ್ಯ ರಕ್ಷಕ ಶೇವಕಾರ ಎಂದು ಕೆಲಸ ಮಾಡುತ್ತಿದ್ದೇನೆ. ಶ್ರೀ. ಲಕ್ಷ್ಮಣ ಖೀರು ಇವರು ಮಾರ್ಚನಿಂದ ವೈದ್ಯಹೆಗ್ಗಾರದಲ್ಲಿ ಅರಣ್ಯ ರಕ್ಷಕ ಎಂತಾ ಕೆಲಸ ಮಾಡುತ್ತಿದ್ದಾರೆ ದಿನಾಂಕ: 28–04–2011ಕ್ಕೆ ನಾನು ಉಮೇಶ ಡಿ. ನಾಯ್ಕ, ಶಾಖಾ ವನಪಾಲಕ, ಲಕ್ಷ್ಮಣ ಖೀರು ಅರಣ್ಯ ರಕ್ಷಕ ಹಾಗೂ ಗಫಾರ ಸಾಬ್ ಅರಣ್ಯ ವೀಕ್ಷಕ ಇವರ ಜೊತೆ ರಾತ್ರಿ ಗಸ್ತು ಕರ್ತವ್ಯಕ್ಕೆ ಹೋಗಿದ್ದೆವು ಈ ರೀತಿ ಗಸ್ತು ತಿರುಗಲು ಹೋದಾಗ ನಮ್ಮ ಜೊತೆ ವಾಕಿಟಾಕಿ ತೆಗೆದುಕೊಂಡು ಹೋಗಿದ್ದೆವು. ನಾವು ಕೊಡ್ಲಗದ್ದಾ ಬೀಟಿನ ಹೊಸಕೊಪ್ಪಾ ಕ್ಯಾಂಪಿನ ಬಳಿ ಹೋದಾಗ ಅಲ್ಲಿ ದುಗ್ಗನ ಬೈಲ್ ಹತ್ತಿರ ಒಂದು ಟಾಟಾ ಮೊಬೈಲ್ ವಾಹನ ಸಂಖ್ಯೆ: ಕೆಎ–47/261 ವಾಹನವು ದುಗ್ಗನಬೈಲ್ ಅರಣ್ಯದ ಒಳಗಡೆ ಹೋಗಿರುವದಾಗಿ ಹಾಗೂ ಆ ಸ್ಥಳದ ರಸ್ತೆ ಬದಿಯಲ್ಲಿ ಒಂದು ಪಲ್ಸರ ಬೈಕ್ ನಿಂತಿರುವದಾಗಿ ದಾರಿ ಹೋಕರು ತಿಳಿಸಿರುವದಾಗಿ ನಮ್ಮ ವಾಕಿಟಾಕಿಗೆ ವಲಯ ಕಚೇರಿಯಿಂದ ಮಾಹಿತಿ ಬಂದಿತು. ಸದರಿ ಪಲ್ಸರ ಗಾಡಿ ಪರಿಶೀಲಿಸಲು ನಾವು ವಜ್ರಳ್ಳಿಯ ಕಡೆಗೆ ಹೊರಟು ದುಗ್ಗನಬೈಲ್ ಪ್ರದೇಶಕ್ಕೆ ಬರುವಷ್ಟರಲ್ಲಿ ಪಲ್ಸರ್ ಕರಿಬಣ್ಣ ವಾಹನ ಸಂಖ್ಯೆ: ಕೆಎ–47/1293 ಹಾಗೂ ಅದರ ಹಿಂದೆ ಒಂದು ಟಾಟಾ ಮೊಬೈಲ್ ನಮ್ಮ ಮುಂದು ದಾಟಿ ಹೋಯಿತು. ಪಲ್ಸರ್ ವಾಹನದ ಮೇಲೆ ಇದ್ದವನು ರಾಜೇಶ ಗಾಂವಕರ ಎಂದು ನಾವು ಗುರುತಿಸಿದೆವು ಹಾಗೂ ಟಾಟಾ ಮೊಬೈಲ್ ನಲ್ಲಿ ಬಾಳೆಕಾಯಿ ತುಂಬಿರುವದು ಕಾಣಿಸಿತು ಬಾತ್ಮಿ ನಡೆದ ಸ್ಥಳವನ್ನು ಮುಟ್ಟಿ ಪರಿಶೀಲಿಸಲಾಗಿ, ರಾಷ್ಟ್ರೀಯ ಹೆದ್ದಾರಿ ಪಕ್ಕದಲ್ಲಿ ಗಟಾರ ಮುಚ್ಚಿ ಹೊಸದಾಗಿರುವ ಅಕೇಶಿಯಾ ನೆಡುತೋಪುನಲ್ಲಿ ರಸ್ತೆ ಮಾಡಿದನ್ನು ನೋಡಿದೆವು. ಹಾಗೂ ಅದೇ ದಾರಿಯಲ್ಲಿ ನಾಲ್ಕು ಚಕ್ರದ ಟಾಯರಿನ ಗುರ್ತು ನೋಡಿ ಮುಂದೆ ಹೋದೆವು. ನಮ್ಮಲ್ಲಿದ್ದ ಚಾರ್ಜಿಂಗ್ ಬ್ಯಾಟರಿ ಸಹಾಯದಿಂದ ನೋಡಲಾಗಿ 5 ಸಾಗಜಾತಿಯ ಮರಗಳನ್ನು ಖರಗಸದಿಂದು ತುಂಡು ಮಾಡಿ ಒಳ್ಳೆಯ ತುಂಡುಗಳನು ಮಾತ್ರ ಹೊಸದಾಗಿ ರಸ್ತೆ ಮಾಡಿದ ಕಡೆಯಲ್ಲಿ ಸಂಗ್ರಹಿಸಿ ಸಾಗಾಣಿಕೆ ಮಾಡಿದ್ದು ಹಾಗೂ ಅಲ್ಲಿ ಬಿದ್ದ ಬಾಳೇಎಲೆಯ ಚೂರುಗಳನ್ನು ಮತ್ತು ಬಾಳೇಕಾಯಿ ನೋಡಿ ನಮ್ಮ ಮುಂದು ಹಾಯ್ದುಹೋದ ಟಾಟಾ ಮೊಬೈಲ್ ವಾಹನದಲ್ಲಿಯೇ ಮರದ ತುಂಡುಗಳನ್ನು ಮರದ ತುಂಡುಗಳನ್ನು ಸಾಗಾಟ ಮಾಡಿದ ಬಗ್ಗೆ ನಮಗೆ ಖಾತ್ರಿಯಾಯಿತು. ಶಾಖಾ ವನಪಾಲಕ, ರಾಮನಗುಳಿ ಇವರ ಹೇಳಿಕೆ ಮೇರೆಗೆ ಮರದ ಬುಡಚಿಗಳ ಅಳತೆ ಮಾಡಿದೆವು. ರಾಜೇಶ ಗಣಪತಿ ಗಾಂವಕರ ಈತನು ತನ್ನ ಪಲ್ಸರ ಬೈಕ್ ಕೆಎ–47/1293ನೇದನ್ನು ಈ ಕೃತ್ಯ ಮಾಡಲು ಉಪಯೋಗಿಸಿದ ಬಗ್ಗೆ ನಮಗೆ ಖಾತ್ರಿಯಾಯಿತು. ಈ ಬಗ್ಗೆ ಸ್ಥಳದಲ್ಲಿ ಒಂದು ಪಂಚನಾಮೆಯನ್ನು ನಾವು ಮಾಡಿದೆವು. ಸಾಕ್ಷಿ ನೋಡಿ ಗುರುತಿಸಿದ ಪಂಚನಾಮೆಯನ್ನು ಪ್ರ.ಸ.–1 ಇವರು ಬರೆದಿರುತ್ತಾರೆ. ಅಲ್ಲಿ ಅರಣ್ಯ ಪ್ರದೇಶವಾಗಿದ್ದು ಯಾವುದೇ ಸಾರ್ವಜನಿಕರು ಇಲ್ಲದೇ ಇದ್ದ ಕಾರಣ ನಾವೇ ಪಂಚರಾಗಿ ಸಹಿ ಮಾಡಿದ್ದು ಸಾಕ್ಷಿ ಪಂಚನಾಮೆ ನೋಡಿ ಗುರುತಿಸಿದ್ದು ಅದನ್ನು ನಿ.ಪಿ–1 ಎಂದು ಈಗಾಗಲೇ ಗುರುತಿಸಲಾಗಿದೆ. ಸಾಕ್ಷಿ ಸಹಿಯನ್ನು ನಿ.ಪಿ–1ಬಿ ಎಂದು

ಗುರುತಿಸಲಾಯಿತು. ನಂತರದಲ್ಲಿ ನಾನು ಮೇಲೆ ಹೇಳಿದ ಪಲ್ಸರ್ ಬೈಕನ್ನು ಪ್ರಸ–1 ಹಾಗೂ ಇತರು ಜನರಿದ್ದ ಗಸ್ತು ತಂಡ ಪಂಚನಾಮೆ ಮಾಡಿ ಜಪ್ತಪಡಿಸಿಕೊಂಡ ಬಗ್ಗೆ ನನಗೆ ಮಾಹಿತಿ ತಿಳಿದು ಬಂದಿತು. ನಿ.ಪಿ–1 ಪಂಚನಾಮೆ ನಂತರ ಈ ಬಗ್ಗೆ ಪ್ರಸ–1 ರವರು ಪ್ರ.ವಾ ವರದಿಯನ್ನು ದಾಖಲಿಸಿರುತ್ತಾರೆ. ರಾಜೇಶ ಗಾಂವಕರ ಈತನು ಕಪ್ಪು ಬಣ್ಣದ ಪಲ್ಸರ್ ವಾಹನ ಸಂಖ್ಯೆ: ಕೆಎ–47/1293ನೇದನ್ನು ಸಾಗ ಮರಗಳನ್ನು ಕಡಿದು ತುಂಡು ಮಾಡಿ ಟಾಟಾ ಮೊಬೈಲ್ ವಾಹನದಲ್ಲಿ ಸಾಗಾಟ ಮಾಡಲು ಬಳಸಿಕೊಂಡಿರುತ್ತಾನೆ. ಹಾಗೂ ಈ ಟಾಟಾ ಮೊಬೈಲ್ ವಾಹನವನ್ನು ರಾಣೆಬೆನ್ನೂರು ಪೋಲಿಸರು ವಶಪಡಿಸಿಕೊಂಡ ಬಗ್ಗೆ ನನಗೆ ಮೇಲಾಧಿಕಾರಿಗಳಿಂದ ಮಾಹಿತಿ ಬಂದಿರುತ್ತದೆ. ವಾಹನದ ಪೋಟೊವನ್ನು ನೋಡಿದಲ್ಲಿ ಗುರುತಿಸುತ್ತೇನೆ. ಸಾಕ್ಷಿ ನೋಡಿ ಗುರುತಿಸಿದ ವಾಹನದ ಫೋಟೋವನ್ನು ನಿ.ಪಿ–4 ಎಂದು ಈಗಾಗಲೇ ಗುರುತಿಸಿದೆ. ವಾಹನವು ಈಗ ಕಾರವಾರ ವಲಯ ಕಚೇರಿ ಆವರಣದಲ್ಲಿ ಇರುತ್ತದೆ. ಈ ಮೇಲಿನ ವಾಹನವನ್ನು ಬಳಸಿಕೊಂಡಿದ್ದರಿಂದ ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಮಾನ್ಯ ನ್ಯಾಯಲಯಕ್ಕೆ ಅರಿಕೆ ಮಾಡಿಕೊಳ್ಳುತ್ತೇನೆ. ತನಿಖಾ ಕಾಲಕ್ಕೆ ಅರ್ಜಿದಾರರು ವಾಹನದ ಮಾಲೀಕರು ಎಂಬ ಮಾಹಿತಿ ನನಗೆ ನನ್ನ ಮೇಲಾಧಿಕಾರಿಗಳಿಂದ ತಿಳಿದು ಬಂದಿರುತ್ತದೆ. ಸದರ ಜಪ್ತಪಡಿಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ಪ್ರಾರ್ಥಿಸುತ್ತೇನೆ.

**ಪಾಟೀ ಸವಾಲು :**

ವಾಹನದ ಮಾಲೀಕರನ್ನು ಕರೆಯಲಾಗಿ ಅವರು ಹಾಜರಾಗಿದ್ದು ಇರುವದಿಲ್ಲ. ಕಾರಣ ಅರ್ಜಿದಾರರ ಪರ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

**ಪಿಡಬ್ಲು–3** ನಾನು 01–04–2011 ರಿಂದ ನಾನು ರಾಮನಗುಳಿ ವಲಯ ಅರಣ್ಯಾಧಿಕಾರಿಯಾಗಿ ಕೆಲಸ ಮಾಡುತ್ತಿದ್ದೇನೆ. ಕೊಡ್ಲಗದ್ದಾ ಬೀಟ್ ರಾಮನಗುಳಿ ವಲಯ ವ್ಯಾಪ್ತಿಗೆ ಬರುತ್ತದೆ. ಈ ಪ್ರಕರಣ ದಾಖಲಾಗುವ ಕಾಲಕ್ಕೆ ಪಿ.ಡಬ್ಲು–1 ಇವರು ಕೊಡ್ಲಗದ್ದಾ ಬೀಟಿಗೆ ಪ್ರಭಾರಿಯಾಗಿ ಅರಣ್ಯರಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದರು. ಹಾಗೂ ಪಿಡಬ್ಲು–2 ಇವರು ಶೇವಕಾರ ಅರಣ್ಯ ಗಸ್ತಿಗೆ ಅರಣ್ಯ ರಕ್ಷಕರಾಗಿ ಕೆಲಸ ನಿರ್ವಹಿಸುತ್ತಿದ್ದರು.

ಈ ಪ್ರಕರಣದ ಮುಂದಿನ ತನಿಖೆಯನ್ನು ಹಳವಳ್ಳಿ ಶಾಖಾ ವನಪಾಲಕರಾದ ಎಸ್.ಜಿ. ಗುನಗಾ ಇವರಿಂದ ಪಡೆದುಕೊಂಡು ಪ್ರಕರಣದ ತನಿಖೆಯನ್ನು ಮುಂದುವರಿಸಿ ತನಿಖಾ ವರದಿಯನ್ನು ತಯಾರಿಸಿದ್ದೇನೆ. ಹಾಗೂ ಪ್ರಕರಣದಲ್ಲಿ ಜಪ್ತಪಡಿಸಿಕೊಳ್ಳಲಾದ ದ್ವಿಚಕ್ರ ವಾಹನ ಪಲ್ಸರ್ ಕೆಎ–47/1293ನೇದರ ಬಗ್ಗೆ ವರದಿಯನ್ನು ಮಾನ್ಯ ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಕಾರವಾರ ರವರ ಸಮಕ್ಷಮ ಹಾಜರುಪಡಿಸಿರುತ್ತೇನೆ. ಹಾಗೂ ವಾಹನವನ್ನು ಸಹ ಹಾಜರುಪಡಿಸಿರುತ್ತೇನೆ. ಈಗ ವಾಹನದ ಫೋಟೋವನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದು ಈಗಾಗಲೇ ನಿ.ಪಿ–4 ಎಂದು ಗುರುತಿಸಲಾಗಿದೆ. ಸಾಕ್ಷಿದಾರರು ತಾವು ತಯಾರಿಸಿದ ತನಿಖಾ ವರದಿಯನ್ನು ನೋಡಿದ್ದು ಅದನ್ನು ನಿ.ಪಿ–6 ಎಂದು ಸಾಕ್ಷಿ ಸಹಿಯನ್ನು ನಿ.ಪಿ–6ಎ ಎಂದು ಗುರುತಿಸಲಾಯಿತು. ಜಪ್ತಪಡಿಸಿಕೊಂಡ ವಾಹನವನ್ನು ಅರಣ್ಯ ಮರಗಳ ಕಳ್ಳ ಸಾಗಾಣಿಕೆಗಾಗಿ ಬಳಸಿಕೊಂಡಿದ್ದರಿಂದ ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ. ಅರ್ಜಿದಾರರು ಸದ್ರಿ ವಾಹನದ ಮಾಲೀಕರಾಗಿರುತ್ತಾರೆ. ಸದರ ಜಪ್ತಪಡಿಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ಪ್ರಾರ್ಥಿಸುತ್ತೇನೆ.

**ಪಾಟೀ ಸವಾಲು :**

ವಾಹನದ ಮಾಲೀಕರನ್ನು ಕರೆಯಲಾಗಿ ಅವರು ಹಾಜರಾಗಿದ್ದು ಇರುವದಿಲ್ಲ. ಕಾರಣ ಅರ್ಜಿದಾರರ ಪರ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

**ಅಂಶ ನಂ. (ಅ):**

ಪಿಡಬ್ಲು–1 ಮತ್ತು 2 ರವರ ಸಾಕ್ಷ್ಯವನ್ನು ಪರಿಶೀಲಿಸಲಾಗಿ, ದಿನಾಂಕ: 29–04–2011 ರಂದು ರಾತ್ರಿ ವೇಳೆಯಲ್ಲಿ ಗಸ್ತಿನಲ್ಲಿರುವ ಸಂದರ್ಭದಲ್ಲಿ ಸುಮಾರು ರಾತ್ರಿ 3.45 ಘಂಟೆಯ ಸಮಯಕ್ಕೆ ರಾಮನಗುಳಿ ವಲಯ ಕಚೇರಿಗೆ ಬಾತ್ಮಿ ಬಂದ ಮೇರೆಗೆ ವಲಯ ಕಚೇರಿಯ ವೈರ್‌ಲೆಸ್ ಡ್ಯೂಟಿಯ ಮೇಲೆ ಇದ್ದ ಸಿಬ್ಬಂದಿಯು ರಾತ್ರಿ ಗಸ್ತು ಕರ್ತವ್ಯದಲ್ಲಿರುವ ಶ್ರೀ ಲಕ್ಷ್ಮಣ ಖೀರು, ಅರಣ್ಯ ರಕ್ಷಕ ಇವರ ವ್ಹಾಕಿಟಾಕಿಗೆ ಕೊಡ್ಲಗದ್ದಾ ಗಸ್ತಿನ ದುಗ್ಗನಬೈಲ್ ಅರಣ್ಯದ ಒಳಗಡೆ ಟಾಟಾಮೊಬೈಲ್ ವಾಹನ ಸಂಖ್ಯೆ:ಕೆಎ–47/261 ವಾಹನ ಹೋಗಿದ್ದು ಆ ಸ್ಥಳದ ರಸ್ತೆಯ ಬದಿಯಲ್ಲಿ ಪಲ್ಸರ್ ವಾಹನ ನಿಂತಿರುವ ಬಗ್ಗೆ ಸ್ಥಳ ಪರಿಶೀಲನೆ ಮಾಡಲು ಬಂದ ಬಾತ್ಮಿಯ ಮೇರೆಗೆ ರಾತ್ರಿ ಗಸ್ತಿನಲ್ಲಿರುವ ಸಿಬ್ಬಂದಿಗಳು ಕಾರ್ಯಪ್ರವೃತ್ತರಾಗಿ ವಜ್ರಳ್ಳಿಯ ಕಡೆಗೆ ಹೊರಟು ಮುಂದುವರೆದು, ದುಗ್ಗನಬೈಲ್ ಬರುವಷ್ಟರಲ್ಲಿ ಪಲ್ಸರ್ ಕರಿ ಬಣ್ಣದ ದ್ವಿಚಕ್ರ ವಾಹನ ಸಂಖ್ಯೆ: ಕೆಎ–47/1293 ಇದರ ಹಿಂದೆ ಟಾಟಾ ಮೊಬೈಲ್ ವಾಹನವು ನಮ್ಮನ್ನು ದಾಟಿ ಹೋದದನ್ನು ಖಾತ್ರಿಪಡಿಸಿಕೊಂಡು ಬೆನ್ನಟ್ಟಿ ಹೋಗಿ ನೋಡಲಾಗಿ, ಪಲ್ಸರ್ ವಾಹನದ ಮೇಲೆ ಇದ್ದವರು ರಾಜೇಶ ಗಣಪತಿ ಗಾಂವಕರ, ಸಾ: ವಜ್ರಳ್ಳಿ ಎಂದು ಗುರುತಿಸಿದೆವು. ಸದರ ಟಾಟಾ ಮೊಬೈಲ್ ವಾಹನದ ಹಿಂಭಾಗದಲ್ಲಿ ಬಾಳೇಕಾಯಿ ತುಂಬಿದನ್ನು ಕಂಡು ಮುಂದುವರೆದು ಬಾತ್ಮಿ ನೀಡಿದ ಸ್ಥಳ ಕೊಡ್ಲಗದ್ದಾ ಬ್ಲಾಕ್–24–9ನ್ನು ಪರಿಶೀಲಿಸಲಾಗಿ ಅದು ರಾಷ್ಟ್ರೀಯ ಹೆದ್ದಾರಿ 63 ರ ಬದಿಯಲ್ಲಿದ್ದ ಗಟಾರವನ್ನು ಮುಚ್ಚಿ ಹೊಸದಾಗಿ ಅಕೇಶಿಯಾ ನೆಡುತೋಪಿನಲ್ಲಿ ರಸ್ತೆ ಮಾಡಿದ್ದನ್ನು ಕಂಡು ನಮ್ಮ ವಾಹನವನ್ನು ನಿಲ್ಲಿಸಿ ದಾರಿಯನ್ನು ನೋಡಲಾಗಿ, ಆ ದಾರಿಯಲ್ಲಿ ನಾಲ್ಕು ಚಕ್ರದ ಸಿಂಗಲ್ ಟಾಯರಿನ ಗುರುತನ್ನು ನೋಡಿ ಚಾರ್ಜಿಂಗ್ ಬ್ಯಾಟರಿಯ ಸಹಾಯದಿಂದ ಮೇಲೆ ಗುಡ್ಡದಲ್ಲಿ ತಿರುಗಾಡಿ ನೋಡಲಾಗಿ ಅಲ್ಲಲ್ಲಿ 5 ಸಾಗ ಮರಗಳನ್ನು ಗರಗಸದಿಂದ ಕಟಾವು ಮಾಡಿ, ಬುಡದಲ್ಲಿಯ ಒಳ್ಳೆಯ ತುಂಡುಗಳನ್ನು ಮಾತ್ರ ರಸ್ತೆ ಮಾಡಿದ ಸ್ಥಳಕ್ಕೆ ಸಂಗ್ರಹಿಸಿ ಕಳ್ಳ ಸಾಗಾಣಿಕೆ ಮಾಡಿರುವ ಬಗ್ಗೆ ಅಲ್ಲಿ ಬಿದ್ದಿರುವ ಬಾಳೆಯ ಎಲೆಯನ್ನು ಗಮನಿಸಿ ಸದರ ಬಾಳೇಕಾಯಿ ತುಂಬಿಕೊಂಡ ವಾಹನದಲ್ಲಿಯೇ ತುಂಡು ಸಾಗಿಸಿದ್ದನ್ನು ಖಚಿತಪಡಿಸಿಕೊಂಡೆವು. ನಂತರ ಒಂದೊಂದು ಮರದಿಂದ ಎಷ್ಟು ತುಂಡು ಮಾಡಿರುವದೆಂಬುದನ್ನು ನೆಲದ ಮೇಲೆ ಬಿದ್ದ ಕಟ್ಟಿಗೆ ಪುಡಿಯ ಆಧಾರದ ಮೇಲೆ ಎಣಿಕೆ ಮಾಡಲಾಗಿ ಅವು ಒಟ್ಟೂ 14 ತುಂಡುಗಳಿದ್ದವು. ನಂತರ ಶಾಖಾ ವನಪಾಲಕ, ರಾಮನಗುಳಿಯವರ ಹೇಳಿಕೆಯಂತೆ ಶ್ರೀ. ಲಕ್ಷ್ಮಣ ಖೀರು ಅರಣ್ಯ ರಕ್ಷಕ ಕೊಡ್ಲಗದ್ದಾ (ಪ್ರಭಾರ) ಇವರು ಎಲ್ಲಾ ಬುಡಗಳ ಅಳತೆ ಮಾಡಿ ಅವುಗಳಿಗೆ ಅನಂ. ಹಾಗೂ ಟಿ ನಿಶಾನೆ ಗುರುತು ಹಾಕಿದ್ದು ಇರುತ್ತದೆ. ಈ ಮೇಲಿನಂತೆ ತಯಾರಿಸಲಾದ 14 ತುಂಡುಗಳನ್ನು ರಾಜೇಶ ಗಣಪತಿ ಗಾಂವಕರ, ಪಲ್ಸರ್ ಬೈಕ್ ವಾಹನ ಸಂಖ್ಯೆ: ಕೆಎ–47/1293ನೇಯವರ ದೇಖರೇಖೆಯಲ್ಲಿ ಟಾಟಾಮೊಬೈಲ್ ನಲ್ಲಿ ಸಾಗಿಸಿದ್ದನ್ನು ಖಾತ್ರಿ ಪಡಿಸಿಕೊಂಡು ಸದರ ಪಂಚನಾಮೆಯನ್ನು ಇಲಾಖಾ ಪಂಚರ ಸಮಕ್ಷಮ ಬೆಳಗ್ಗಿನ ಜಾವಾ 4.30 ಘಂಟೆಗೆ ಕತ್ತಲು ಇರುವದರಿಂದ ಚಾರ್ಜ ಬ್ಯಾಟರಿ ಬೆಳಕಿನ ಸಹಾಯದಿಂದ ಬರೆದು ಬೆಳಿಗ್ಗೆ 6.00 ಘಂಟೆಯ ಸಮಯಕ್ಕೆ ಮುಗಿಸಿದ್ದು ಇರುತ್ತದೆ. ನಂತರ ಅದೇ ದಿವಸ ಬೆಳಗ್ಗಿನ ಜಾವ 4.30 ಘಂಟೆಗೆ ಗುನ್ಹೆ ಸಂಭವಿಸಿದ 5 ಸಾಗವಾನಿ ಮರಗಳ ಮರವಣಿ ಪಂಚನಾಮೆ ಮಾಡಲಾಗಿ ಸದರ 5 ಮರಗಳಿಂದ ಹೊರಟ ಮ್ಹಾಲು 18=0.860 ಘ.ಮೀ. ಇದ್ದದ್ದನ್ನು ವನಪಾಲಕ, ರಾಮನಗುಳಿ ಇವರು ಅರಣ್ಯ ವೀಕ್ಷಕರ ಸಹಾಯದಿಂದ ಅಳತೆ ಮಾಡಿದರು. ನಂತರ 18 ನಗಗಳಿಗು ಟೀ ನಿಶಾನೆ ಹಾಕಿ ಭದ್ರತೆಯ ಸಲುವಾಗಿ ರಾಮನಗುಳಿ

ನಾಕಾ ಕಂಪೌಂಡಿಗೆ ಟ್ರಾಕ್ಟರ್ ಮೂಲಕ ತರುವ ವ್ಯವಸ್ಥೆ ಮಾಡಲಾಯಿತು. ಸದರ ಪಂಚನಾಮೆಯನ್ನು ಬೆಳಿಗ್ಗೆ 10.00 ಘಂಟೆಗೆ ಪ್ರಾರಂಭಿಸಿ 11.30 ಗಂಟೆಗೆ ಇಲಾಖಾ ಪಂಚರ ಸಮಕ್ಷಮ ಬರೆಯಿಸಿದ್ದು ಇರುತ್ತದೆ. ಸದರ ಸಾಗ ಮರಗಳನ್ನು ಕಡಿದು ತುಂಡು ಮಾಡಿ ಟಾಟಾ ಮೊಬೈಲ್ ವಾಹನದಲ್ಲಿ ಸಾಗಾಟ ಮಾಡಲು ಬಳಸಿಕೊಂಡ ವಾಹನವನ್ನು ರಾಣೆಬೆನ್ನೂರು ಪೋಲಿಸರು ವಶಪಡಿಸಿಕೊಂಡ ಬಗ್ಗೆ ಮೇಲಾಧಿಕಾರಿಗಳಿಂದ ಮಾಹಿತಿ ಬಂದಿರುತ್ತದೆ. ಅಲ್ಲದೇ ಗುನ್ಹೆಯಲ್ಲಿ ಜಪ್ತ ಮಾಡಿದ ಪಲ್ಸರ್ ಬೈಕ್ ವಾಹನ ಸಂಖ್ಯೆ: ಕೆಎ–47/1293 ಅನಧಿಕೃತವಾಗಿ ಕಟ್ಟಿಗೆ ಸಾಗಿಸುತ್ತಿರುವ ಬಗ್ಗೆ ದೃಢಪಟ್ಟಿಕೊಂಡು ಅರಣ್ಯ ರಕ್ಷಕ ವೈದ್ಯಹೆಗ್ಗಾರ ಪ್ರಭಾರಿ ಕೊಡ್ಲಗದ್ದಾ ಬೀಟ ಇವರು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 62, 81ಎ, 80 ಮತ್ತು 104ಎ ಪ್ರಕಾರ ಪ್ರಥಮ ಮಾಹಿತಿ ವರದಿ ಸಂಖ್ಯೆ: 01/2011–12, ದಿನಾಂಕ: 29–04–20111 ರ ಪ್ರಕಾರ ಅರಣ್ಯ ಮೊಕದ್ದಮೆ ದಾಖಲಿಸಿಕೊಂಡಿದ್ದು ಇರುತ್ತದೆ. ಸದರ ವಾಹನವು ಅರಣ್ಯ ಗುನ್ಹೆಯಲ್ಲಿ ಬಳಸಿದ ಬಗ್ಗೆ (ನಿ.ಪಿ– 1ರಿಂದ ನಿ.ಪಿ–6) ಹಾಜರುಪಡಿಸಲಾಗಿದೆ. ಇದೂ ಅಲ್ಲದೇ ಸರ್ಕಾರ ಪರ ಸಾಕ್ಷಿ ವಿಚಾರಣೆಯಲ್ಲಿ **ಪಿಡಬ್ಲು–1 ಮತ್ತು 2** ಇವರು ತಮ್ಮ ಸಾಕ್ಷದಲ್ಲಿ ನಿ.ಪಿ–1ಕ್ಕೆ ಸಹಿ ಹಾಕಿದ ಬಗ್ಗೆ ತಮ್ಮ ಮುಖ್ಯ ವಿಚಾರಣೆಯಲ್ಲಿ ಹೇಳಿದ್ದು ಇದರಿಂದ ಪಲ್ಸರ್ ಬೈಕ್ ವಾಹನ ಸಂಖ್ಯೆ: ಕೆಎ–47/1293 ಕಾಯ್ದಿಟ್ಟ ಅರಣ್ಯ ಪ್ರದೇಶದಲ್ಲಿ 5 ಸಾಗವಾನಿ ಮರಗಳನ್ನು ಕಡಿದು ಅನಧಿಕೃತ ಕಳ್ಳ ಸಾಗಾಣಿಕೆಯ ಅಪರಾಧದಲ್ಲಿ ಬಳಸಿಕೊಂಡಿದ್ದು ಖಚಿತಪಡಿಸುತ್ತದೆ. ಪಿಡಬ್ಲು–1 ರವರು ದಿನಾಂಕ: 02–05–2011 ರಂದು ಗಸ್ತು ಕರ್ತವ್ಯದಿಂದ ಮರಳಿ ಬರುತ್ತಿರುವಾಗ ಆರೋಪಿಯಾದ ರಾಜೇಶ ಗಾಂವರಕ ಈತನು ಕೃತ್ಯಕ್ಕೆ ಬಳಸಿಕೊಂಡ ಕೆಎ–47/1293 ಪಲ್ಸರ್ ದ್ವಿಚಕ್ರ ವಾಹನವನ್ನು ತೆಗೆದುಕೊಂಡು ಹೋಗುತ್ತಿರುವಾಗ ಬೆನ್ನಟ್ಟಿ ಹೋಗಿದ್ದ ಬಗ್ಗೆ ಹಾಗು ಅದನ್ನು ನಿ.ಪಿ–2 ರಂತೆ ಜಪ್ತಪಡಿಸಿಕೊಂಡ ಬಗ್ಗೆ ಸ್ಪಷ್ಟವಾಗಿ ಸಾಕ್ಷ್ಯ ನುಡಿದಿರುತ್ತಾರೆ. ಕಾರಣ ಪಿಡಬ್ಲು–1 ಮತ್ತು ಪಿಡಬ್ಲು–2 ರವರ ಸಾಕ್ಷ್ಯವನ್ನು ಪರಿಗಣನೆಗೆ ತೆಗೆದುಕೊಂಡಾಗ ನಿ.ಪಿ–1 ಮತ್ತು 2ನ್ನು ಪರಿಶೀಲಿಸಿದಾಗ ಮತ್ತು ಪಿಡಬ್ಲು–3 ರವರು ಸಲ್ಲಿಸಿದ ತನಿಖಾ ವರದಿಯನ್ನು ಪರಿಶೀಲಿಸಿದಾಗ ಕೆಎ–47/1293 ಪಲ್ಸರ್ ದ್ವಿಚಕ್ರ ವಾಹನವನ್ನು ಕಾಯ್ದಿಟ್ಟ ಅರಣ್ಯ ಪ್ರದೇಶದಲ್ಲಿ 5 ಸಾಗವಾನಿ ಮರಗಳನ್ನು ಕಡಿದು ಅನಧಿಕೃತ ಕಳ್ಳ ಸಾಗಾಣಿಕೆಗೆ ಬಳಸಿಕೊಂಡಿರುವದು ಖಚಿತವಾಗುತ್ತದೆ. ಕಾರಣ ಈ ಅಂಶವನ್ನು ಸಕಾರಾತ್ಮಕವಾಗಿ ಉತ್ತರಿಸುತ್ತೇನೆ.

**ಅಂಶ ನಂ. (ಈ):**

ಈ ಪ್ರಕರಣದಲ್ಲಿ ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರು ಈ ಪ್ರಕರಣದ ಗುನ್ಹೆ ದಾಖಲಿಸಿದ ಹಾಗೂ ಸಾಕ್ಷಿಗಳ ವಿಚಾರಣೆಯಿಂದ ಹೇಳಿಕೆಯನ್ನು ದಾಖಲು ಮಾಡಿಕೊಳ್ಳಲಾಗಿದ್ದು, ಸದರ ಅರ್ಜಿದಾರನಾಗಲಿ ಅಥವಾ ಅವರ ಪರ ವಕಾಲತ್‌ವಹಿಸಿದ ನ್ಯಾಯವಾದಿಗಳಾಗಲಿ ತಮ್ಮ ಹೇಳಿಕೆಯನ್ನು ಸಮರ್ಥಿಸಬಹುದಾದಂತಹ ಯಾವುದೇ ದಾಖಲೆ/ಸಾಕ್ಷಿ ಪುರಾವೆಗಳನ್ನು ಒದಗಿಸುವಲ್ಲಿ ವಿಫಲರಾಗಿದ್ದಾರೆ. ಮುಂದುವರಿದು ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ವಾದ ಪುಷ್ಟೀಕರಿಸಲು ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು 2009 (I) Crime Page 25 ಇದನ್ನು ನೀಡಿರುತ್ತಾರೆ ಮತ್ತು ಸಹಾಯಕ ಅಭಿಯೋಗ ನಿರ್ದೇಶಕರು ಹಾಜರುಪಡಿಸಿದ ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು ನೋಡಲಾಗಿ ಯಾವುದೇ ವಾಹನವು ಅರಣ್ಯ ಉತ್ಪನ್ನಗಳ ಅನಧಿಕೃತ ಸಾಗಾಟ ಮಾಡಲು ಬಳಸಿದ್ದಲ್ಲಿ ಅದು Deforestation ಆಗಲು ಕಾರಣವಾಗುತ್ತದೆ ಎಂದು ಭಾವಿಸಬೇಕು ಹಾಗೂ ಇದು ನೈಸರ್ಗಿಕ ಅಸಮತೋಲನಕ್ಕೆ ಕಾರಣವಾಗುತ್ತದೆ. ಅರಣ್ಯ ಕಾಪಾಡುವದು ಇಲಾಖೆಯ ಕರ್ತವ್ಯವಾಗಿದ್ದು ಅನಧಿಕೃತವಾಗಿ ವಾಹನವನ್ನು ಮರಗಳ ಸಾಗಾಟಕ್ಕೆ ಬಳಸಿದರೆ ಬಹಿರಂಗ ಹರಾಜು ಮಾಡಬಹುದೆಂದು ಆದೇಶ ಮಾಡಿದ್ದು ಇರುತ್ತದೆ. ಆದ್ದರಿಂದ ಪರ ಹಾಗೂ ಅರ್ಜಿದಾರರ ಪರ ದಾಖಲೆಗಳನ್ನು, ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಲಾಗಿ, ವಾಹನ ಪಲ್ಸರ್ ದ್ವಿಚಕ್ರ ವಾಹನ ಸಂಖ್ಯೆ: ಕೆಎ–47/1293 ಇದು ದಿನಾಂಕ: 24–01–2007 ರಂದು ಪ್ರಥಮ ಮಾಹಿತಿ ಸಂಖ್ಯೆ: 1/2011–12, ದಿನಾಂಕ: 29–04–2011 ರನ್ವಯ ದಾಖಲಾದ ಗುನ್ಹೆಯಲ್ಲಿ ಅನಧಿಕೃತವಾಗಿ 5 ಸಾಗವಾನಿ ಮರಗಳನ್ನು ಕಡಿದು ಕಳ್ಳ ಸಾಗಾಣಿಕೆಯಿಂದ ಸಾಗಿಸುವಲ್ಲಿ ತೊಡಗಿಸಿಕೊಂಡಿದ್ದು ದೃಢಪಟ್ಟಿರುವದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ)ರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬೇಕೆನ್ನುವ ಅಂಶವು ಮನದಟ್ಟಾಗಿದೆ.

ಆದ್ದರಿಂದ ಈ ಕೆಳಗಿನಂತೆ ಆದೇಶ:

**:ಆದೇಶ:**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ ಟಿ.ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಆದ ನಾನು ಈ ಮೂಲಕ ಆದೇಶಿಸುವದೇನೆಂದರೆ ಈ ಗುನ್ಹೆ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963ರ ಅನುಚ್ಛೇದ 71 (ಎ) ಈ ತಾರೀಖಿನ ವರೆಗೆ ಆದ ತಿದ್ದುಪಡಿ ಪ್ರಕಾರ ಪಲ್ಸರ್ ದ್ವಿಚಕ್ರ ವಾಹನ ಸಂಖ್ಯೆ: ಕೆಎ–47/1293 ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

**ವಾಹನದ ವಿವರ:**

| | | | |
|---|---|---|---|
| 1) | ನೋಂದಣಿ ಸಂಖ್ಯೆ | : | KA-47/1293 |
| 2) | ಇಂಜಿನ್ ನಂಬರ | : | DHGBLE32119 |
| 3) | ಚಾಸಿ ನಂಬರ | : | DHVBLE32923 |
| 4) | ವಾಹನದ ಮಾದರಿ | : | ಬಜಾಜ್ ಪಲ್ಸರ್ (ಎರಡು ಗಾಲಿ) |

ಈ ಆದೇಶವನ್ನು ಹೊರಡಿಸಿದ 30 ದಿನಗಳ ಅವಧಿಯಲ್ಲಿ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ಈ ಹೊತ್ತಿನ ದಿನಾಂಕ: 13–02–2015 ರಂದು ಈ ನ್ಯಾಯಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

(Certified Copy)

**ಟಿ.ಹೀರಾಲಾಲ್, ಭಾ.ಅ.ಸೇ.**
ಅಧಿಕಾರಿಯುತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಕಾರವಾರ ವಿಭಾಗ, ಕಾರವಾರ.

PR. 327
SC. 05

**ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಇವರ ನ್ಯಾಯಾಲಯ**

**ಕ್ರ.ಸಂ:ಎ1/ಎಸ್1/ಎಫ್‌ಓಸಿ/ವಿವ–1/2010–11, ಕಾರವಾರ, ದಿನಾಂಕ: 13–02–2015.**

**ಉಪಸ್ಥಿತರು:** ಶ್ರೀ. ಟಿ. ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ
ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

**ಫಿರ್ಯಾದುದಾರರು:** ವಲಯ ಅರಣ್ಯಾಧಿಕಾರಿ,
ಕಾರವಾರ ವಲಯ
ಕಾರವಾರ
(ಸರ್ಕಾರದ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಉ.ಕನ್ನಡ ಕಾರವಾರ)

**ವಿರುದ್ಧ**

**ಅರ್ಜಿದಾರರು:** ಆನಂದು ರಾಮಾ ಗುನಗಾ
ಸಾ: ಘಾಡಸೈ, ಕಿನ್ನರ,
ತಾಲೂಕು: ಕಾರವಾರ
ಜಿಲ್ಲೆ: ಉತ್ತರಕನ್ನಡ.
(ಅರ್ಜಿದಾರರ ಪರವಾಗಿ ಶ್ರೀ. ಸಿ.ಕೆ. ಸಿದ್ಧರಕರ ವಕೀಲರು)

**ಪ್ರಸ್ತಾವನೆ:**

1. ದಿನಾಂಕ: 31–07–2010 ರಂದು ರಾತ್ರಿ 11.00 ಘಂಟೆಗೆ ಶಾಖಾ ವನಪಾಲಕ ಸಿದ್ಧರ ಇವರಿಗೆ ಮೇಲಾಧಿಕಾರಿಗಳಿಂದ ಗುನ್ನೆಯ ಬಗ್ಗೆ ಬಾತ್ಮಿ ಬಂದ ಮೇರೆಗೆ ಶಾಖಾ ವನಪಾಲಕ ಸಿದ್ಧರ, ಶಹರ ವನಪಾಲಕ ಕಾರವಾರ, ನೈತಿ ವನಪಾಲಕ ಹಾಗೂ ಈರ್ವರು ದಿನಗೂಲಿ ನೌಕರರನ್ನು ಕೂಡಿಕೊಂಡು ಇಲಾಖಾ ವಾಹನ ಸಂಖ್ಯೆ: ಕೆಎ–30/ಜಿ–311 ರಲ್ಲಿ ಕಾರವಾರ–ಕೈಗಾ ರಸ್ತೆ ಮುಖವಾಗಿ ಹೊರಟು ಸಿದ್ಧರ ಕಡೆಗೆ ಹೋಗಿ ಇಲಾಖಾ ವಾಹನವನ್ನು ಸಿದ್ಧರ ಅರಣ್ಯ ವಸತಿ ಗೃಹದ ಪಕ್ಕದಲ್ಲಿ ಇಟ್ಟು ಕಾಯುತ್ತಿರುವಾಗ ಸುಮಾರು ರಾತ್ರಿ 1.30 ಘಂಟೆಗೆ ಕೈಗಾ ಕಡೆಯಿಂದ ಒಂದು ವಾಹನವು ಬರುತ್ತಿರುವದನ್ನು ಗಮನಿಸಿ ಅದನ್ನು ಕೈಸನ್ನೆ ಮಾಡಿ ಅಡ್ಡಗಟ್ಟಿ ನಿಲ್ಲಿಸಿದಂತೆ ವಾಹನ ಚಾಲಕನು ಗಾಡಿಯನ್ನು ರಸ್ತೆ ಪಕ್ಕಕ್ಕೆ ನಿಲ್ಲಿಸಿದಾಗ ಬ್ಯಾಟರಿಯ ಬೆಳಕಿನಿಂದ ವಾಹನವನ್ನು ನೋಡಲಾಗಿ ಅದು ಕೆಎ–30/8579 ಟಾಟಾ ಟೆಂಪೋ ಮಾದರಿಯ ವಾಹನವೆಂದು ತಿಳಿದು ಬಂದಿತು. ನಂತರ ವಾಹನ ಚಾಲಕನ ಹೆಸರನ್ನು ಸಿಬ್ಬಂದಿಯವರು ವಿಚಾರಿಸಲಾಗಿ ಆತನು ವಿನಾಯಕ ಆನಂದು ಗುನಗಿ, ಸಾ:ಕಿನ್ನರ ಘಾಡಸೈ ಅಂತಾ ತಿಳಿಸಿದನು. ಮುಂದುವರೆದು ವಾಹನದ ಒಳಭಾಗದಲ್ಲಿ ಪರಿಶೀಲಿಸಲಾಗಿ ಅದರಲ್ಲಿ ಸಾಗವಾನಿ ಕೊರೆದ ಕಟ್ಟಿಗೆ ತುಂಡುಗಳು ಇದ್ದವು. ಸದರ ಕಟ್ಟಿಗೆಯ ಸಾಗಾಟ ಮಾಡಲು ಪಾಸ್/ಫರ್ಮಿಟ್ ಇದೆಯೋ ಎಂದು ವಿಚಾರಿಸಲಾಗಿ ತನ್ನಬಳಿ ಪಾಸ್/ಫರ್ಮಿಟ್ ಇಲ್ಲವೆಂದು ಅದನ್ನು ತಾನು ನಗೆಕೊವೆ ದೇವಸ್ಥಾನದ ಹತ್ತಿರದಿಂದ ತುಂಬಿ ತಂದಿರುವ ಬಗ್ಗೆ ತಿಳಿಸಿದನು. ನಂತರ ಪಂಚರ ಸಮಕ್ಷಮ ವಾಹನದಲ್ಲಿದ್ದ ಎಲ್ಲಾ ಕಟ್ಟಿಗೆಯನ್ನು ಕೆಳಗೆ ಹಾಕಿ ಅದಕ್ಕೆ ನಂಬರ ಛಪ್ಪಾ ವಗ್ಯೆರೆ ಇಲ್ಲದನ್ನು ನೋಡಿ ಇದನ್ನು ಅನಧಿಕೃತವಾಗಿಯೇ ತಂದಿದ್ದು ಎಂದು ಸಿಬ್ಬಂದಿಗಳು ಸಾಬೀತುಪಡಿಸಿಕೊಂಡು ನಂತರ ಬ್ಯಾಟರಿ ಹಾಗೂ ವಾಹನದ ಡೈನಮೋ ಬೆಳಕಿನಿಂದ ಕಟ್ಟಿಗೆ ಅಳತೆ ಮಾಡಲಾಗಿ ಅವು 30=0.896 ಘ.ಮೀ. ಇದ್ದವು. ನಂತರ ಎಲ್ಲಾ ಕಟ್ಟಿಗೆ ತುಂಡುಗಳಿಗೆ ಹಳದಿ ಖಡುವಿನಿಂದ ನಂಬರ ಹಾಕಿ ಟೀ. ನಿಶಾನೆ ಛಪ್ಪಾ ಹೊಡೆದು ಜಪ್ತಪಡಿಸಿಕೊಂಡರು. ನಂತರ ವಾಹನದ ಕಾಗದ ಪತ್ರಗಳಾದ ಆರ್.ಸಿ.ಪುಸ್ತಕ, ಇನ್ಸೂರೆನ್ಸ್ ಪ್ಯಾಡನ್ನು ಸಹ ತಮ್ಮ ವಶಪಡಿಸಿಕೊಂಡೆವು. ಜಪ್ತಪಡಿಸಿದ ವಾಹನವು ತಿಳಿ ಬಿಳಿಯದಾಗಿದ್ದು ಅದರಲ್ಲಿ ಕೆಂಪು ಬಣ್ಣದಿಂದ ಇಂಗ್ಲೀಷ್ ಅಕ್ಷರದಲ್ಲಿ ಸೀತಾರಾಮ ಅಂತ ಹಾಗೂ ಕನ್ನಡದಲ್ಲಿ ತಾಯಿಯ ಆಶೀರ್ವಾದ ಅಂತಾ ಬರೆದಿದ್ದು ಇರುತ್ತದೆ. ಜಪ್ತಪಡಿಸಿದ ವಾಹನವು TATA ACE ಆಗಿದ್ದು ಬ್ಯಾಟರಿ ಹಾಗೂ ವಾಹನದ ಹೆಡ್‌ಲೈಟ್ ಸಹಾಯದಿಂದ ಅದರ ಚಾಸಿಸ್ ನಂ. 445051 JRIV 50690 ಹಾಗೂ ಇಂಜಿನ್ ನಂ. 2751105JR2 552810 ಅಂತಾ ಇರುವದನ್ನು ನೋಡಿರುತ್ತೇವೆ. ಸದರ ಜಪ್ತ ಪಡಿಸಿದ TATA ACE ನೋಂದಣಿ ಸಂಖ್ಯೆ: 30/8579 ಮತ್ತು ಸಾಗ ನಗಗಳು 30=0.896 ಘ.ಮೀ. ಮುದ್ದೆ ಮ್ಹಾಲು ಇದನ್ನು ಅನಧಿಕೃತವಾಗಿ ಸಾಗಿಸುತ್ತಿರುವ ಬಗ್ಗೆ ದೃಢಪಟ್ಟಿಕೊಂಡು ಶಾಖಾ ವನಪಾಲಕ, ಸಿದ್ಧರ ಇವರು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24 (ಇ), 71ಎ, 80, 50, 99, 104 ಮತ್ತು ಕೆ.ಎಫ್.ಆರ್.169, 144 & 165 ಪ್ರಕಾರ ಪ್ರಥಮ ಮಾಹಿತಿ ವರದಿ ಸಂಖ್ಯೆ: 18/10–2011, ದಿನಾಂಕ: 01–08–2010 ರ ಪ್ರಕಾರ ಅರಣ್ಯ ಮೊಕದ್ದಮೆ ದಾಖಲಿಸಿಕೊಂಡಿದ್ದು ಇರುತ್ತದೆ. ಈ ಕುರಿತು ಪಂಚರ ಸಮಕ್ಷಮ ಪಂಚನಾಮೆಯನ್ನು ಶಾಖಾ ವನಪಾಲಕ, ನೈತಿ ಇವರು ಬ್ಯಾಟರಿ ಹಾಗೂ ಡೈನಮೊ ಬೆಳಕಿನಿಂದ ರಾತ್ರಿ. 2.00 ಘಂಟೆಯಿಂದ ಪ್ರಾರಂಭಿಸಿ 3.00 ಘಂಟೆಗೆ ಬರೆದು ಮುಗಿಸಿದ್ದು ಇರುತ್ತದೆ. ನಂತರ ಜಪ್ತಪಡಿಸಿದ ವಾಹನ ಹಾಗೂ ಮುದ್ದೇಮ್ಹಾಲು ಸಮೇತ ಕಾರವಾರ ವಲಯ ಕಚೇರಿಗೆ ತೆಗೆದುಕೊಂಡು ಹೋಗಲು ತೀರ್ಮಾನಿಸಲಾಯಿತು. ಭದ್ರತೆಗೋಸ್ಕರ ವಲಯ ಅರಣ್ಯಾಧಿಕಾರಿಗಳ ಕಚೇರಿ ಆವರಣಕ್ಕೆ ತರಲಾಯಿತು. ವಲಯ ಅರಣ್ಯಾಧಿಕಾರಿ, ಕಾರವಾರ ಇವರ ವರದಿ ದಿನಾಂಕ: 01–08–2010 ರಂದು ಜಪ್ತ ವಾಹನ ಮತ್ತು ಕಟ್ಟಿಗೆಯನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿದ್ದು ಇರುತ್ತದೆ. ಸದರ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಖಾತ್ರಿಪಡಿಸಿ ಈ ಪ್ರಾಧಿಕಾರದ ಆದೇಶ ದಿನಾಂಕ 23–08–2010 ರಂದು ಸದರ ಜಪ್ತಪಡಿಸಿದ ವಾಹನ ಮತ್ತು ಸಾಗ ನಗಗಳನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಕಾರವಾರ ಇವರ ತಾಬಾದಲ್ಲಿ ವಹಿಸಿಕೊಡಲಾಯಿತು.

2. ಸದರ ಜಪ್ತ ವಾಹನದ ಮಾಲೀಕತ್ವದ ಕುರಿತು ಈ ನ್ಯಾಯಾಲಯದಿಂದ ದಿನಾಂಕ: 12–01–2012, 12–2–2012, ಮತ್ತು 29–02–2012 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾರವಾರ ಇವರಿಗೆ ಪತ್ರ ಬರೆಯಲಾಗಿ ಅವರಿಂದ ದಿನಾಂಕ: 01–03–2012 ರಂದು ವಾಹನದ ಮಾಲೀಕತ್ವದ ಬಗ್ಗೆ B Sheet Report ವರದಿ ನೀಡಿ ಸದರ TATA ACE ವಾಹನ ನೋಂದಣಿ ಸಂಖ್ಯೆ: ಕೆಎ–30/8579 ಇದು ಶ್ರೀ. ಆನಂದು ಆರ್. ಗುನಗಿ, ಸನ್ ಆಫ್:ರಾಮಾ ಗುನಗಿ, ಸಾ: ಘಾಡಸೈ, ಕಿನ್ನರ ಕಾರವಾರ ಇವರು ಮಾಲೀಕತ್ವದ ಬಗ್ಗೆ ತಿಳಿಸಿದ್ದು ಇರುತ್ತದೆ.

3. ಈ ಪ್ರಕರಣದ ವಿಚಾರಣೆಗಾಗಿ ವಾಹನ ಮಾಲೀಕರಿಗೆ ಈ ನ್ಯಾಯಾಲಯದಿಂದ ದಿನಾಂಕ: 21–06–2012, 04–07–2012, 25–07–2012, 28–08–2012, 11–09–2012, 30–08–2013, 05–09–2013, 08–11–2013, 21–11–2013, 06–12–2013, 20–12–2013,

03–01–2014, 17–01–2014, 14–02–2014, 28–02–2014, 30–05–2014, 27–06–2014, 18–07–2014, 22–08–2014, 05–09–2014, 31–10–2014, 21–11–2014, 12–12–2014 ಮತ್ತು 23–01–2015 ರಂದು ಹಾಜರಾಗಲು ಮತ್ತು ಅವರ ಪರ ವಕಾಲತ್ ವಹಿಸಿದ ನ್ಯಾಯವಾದಿಗಳಿಗೂ ನೋಟೀಸು ಜಾರಿ ಮಾಡಿದ್ದು ಇರುತ್ತದೆ.

4. ಜಪ್ತುಪಡಿಸಿದ ವಾಹನದ ಬಗ್ಗೆ ಮುಂದಿನ ಆದೇಶಕ್ಕಾಗಿ ಪ್ರಕರಣವನ್ನು ವಿಚಾರಣೆಗಾಗಿ ಕೈಗೆತ್ತಿಕೊಳ್ಳಲಾಯಿತು. ಅರ್ಜಿದಾರರು ಹಾಗೂ ಪರ ವಕೀಲರು ಸಾಕ್ಷಿ ವಿಚಾರಣೆ ಕಾಲಕ್ಕೆ ಹಾಜರಾಗಿದ್ದು ಇರುವದಿಲ್ಲ ಹಾಗೂ ಎದುರುದಾರರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ವಿಚಾರಣೆಗೆ ಹಾಜರು ಆಗಿರುತ್ತಾರೆ. ಫಿರ್ಯಾದುದಾರ/ಎದುರುದಾರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಪಿಡಬ್ಲ್ಯು–1 ರಿಂದ ಪಿಡಬ್ಲ್ಯು–3 ರವರನ್ನು ವಿಚಾರಿಸಿರುತ್ತಾರೆ.

ಪಿಡಬ್ಲ್ಯು–1 : ಶ್ರೀ. ಸುರೇಶ ಬುದ್ದು ಹರಿಕಂತ್ರ, ನಿವೃತ್ತ ಉಪ ವಲಯ ಅರಣ್ಯಾಧಿಕಾರಿ

ಪಿಡಬ್ಲ್ಯು–2 : ಶ್ರೀ. ಮೋಹನ ದುಗ್ಗಾ ಪಡ್ತಿ, ದಿನಗೂಲಿ ನೌಕರ, ಕಾರವಾರ ವಲಯ

ಪಿಡಬ್ಲ್ಯು–3 : ಶ್ರೀ. ಮಂಜುನಾಥ ಗಿಡ್ಡಪ್ಪ ನಾವಿ, ವಲಯ ಅರಣ್ಯಾಧಿಕಾರಿ, ಕಾರವಾರ.

ನಿಶಾನೆ ಪಿ–1 ರಿಂದ ಪಿ–6 ನ್ನು ಹಾಜರುಪಡಿಸಿರುತ್ತಾರೆ.

ನಿಶಾನೆ ಪಿ–1 : ಪಂಚನಾಮೆ

ನಿಶಾನೆ ಪಿ–2 : ಪ್ರಥಮ ಮಾಹಿತಿ ವರದಿ

ನಿಶಾನೆ ಪಿ–3 : ಸೀಜರ್ ರಿಪೋರ್ಟ

ನಿಶಾನೆ ಪಿ–4 : ಆರೋಪಿತನ ಹೇಳಿಕೆ

ನಿಶಾನೆ ಪಿ–5&6 : ವಾಹನದ ಛಾಯಾ ಚಿತ್ರ.

5. ಹಾಜರುಪಡಿಸಿದ ಎಲ್ಲಾ ಲಿಖಿತ ದಾಖಲೆಗಳು ಮತ್ತು ಹೇಳಿಕೆಗಳನ್ನು ಆಲಿಸಿ, ಪರಿಶೀಲಿಸಿದ ನಂತರ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ.

ಅ) ಈ ಪ್ರಕರಣದಲ್ಲಿ ಸರ್ಕಾರಿ ಸ್ವತ್ತುಗಳಾದ ಸಾಗವಾನಿ ನಗಗಳು 30=0.896 ಘ.ಮೀ ಅಧಿಕೃತ ಪಾಸ್ ಯಾ ಫರ್ಮಿಟ್ ಇಲ್ಲದೆ ಸಾಗಿಸುತ್ತಿದ್ದ ಬಗ್ಗೆ ಗುನ್ನೆ ದಾಖಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಆ) ಈ ಮೇಲೆ ನಮೂದಿಸಿದ ಸಾಗವಾನಿ ನಗಗಳು 30=0.896 ಘ.ಮೀ. ಕಳ್ಳ ಸಾಗಾಣಿಕೆ ಮಾಡುವಲ್ಲಿ TATA ACE ವಾಹನ ನೋಂದಣಿ ಸಂಖ್ಯೆ: ಕೆಎ–30/8579 ಉಪಯೋಗ ಮಾಡಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಈ) ಈ ವಾಹನವನ್ನು ಅರಣ್ಯ ಕಾಯಿದೆ 71ಎ ನಿಯಮದಡಿ ಮುಟ್ಟುಗೋಲು ಹಾಕಿಕೊಳ್ಳಬಹುದೇ?

**ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.**

ಅಂಶ ನಂ. (ಅ) –– ಹೌದು

ಅಂಶ ನಂ. (ಆ) –– ಹೌದು

ಅಂಶ ನಂ. (ಈ) –– ಹೌದು

ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ವಿವರಿಸುತ್ತೇನೆ.

**ವಿಚಾರಣೆ ಕಾಲಕ್ಕೆ ನೀಡಲಾದ ಹೇಳಿಕೆಗಳು:**

**ಅಂಶ ನಂ (ಅ):**

**ಪಿ.ಡಬ್ಲ್ಯು–1** ನಾನು 2008 ರಿಂದ 2012 ವರೆಗೆ ಶಾಖಾ ವನಪಾಲಕ ಶಿದ್ಧರ ಅಂತಾ ಕೆಲಸ ಮಾಡಿರುತ್ತೇನೆ ಶಿದ್ಧರ ಶಾಖೆಯು ಕಾರವಾರ ವಲಯ ವ್ಯಾಪ್ತಿಗೆ ಬರುತ್ತಿದ್ದು ಈ ಪ್ರಕರಣ ದಾಖಲಾಗುವ ಕಾಲಕ್ಕೆ ಶ್ರೀ. ವೈ.ಎನ್. ರಾಣೆಯವರು ವಲಯ ಅರಣ್ಯ ಅಧಿಕಾರಿಯಾಗಿ ಕೆಲಸ ಮಾಡುತ್ತಿದ್ದರು. ಶ್ರೀ.ಟಿ.ಜಿ.ನಾಯ್ಕ, ಶಹರ ವನಪಾಲಕ, ಕಾರವಾರ ಮತ್ತು ಶ್ರೀ. ಯು.ಎಸ್. ತಳೇಕರ, ಇವರು ನೈತಿ ಶಾಖೆಯಲ್ಲಿ ವನಪಾಲಕರಾಗಿ ಕೆಲಸ ನಿರ್ವಹಿಸುತ್ತಿದ್ದರು.

ದಿನಾಂಕ 31–7–2010 ರಂದು ನಾನು ರಾತ್ರಿ ಸಿದ್ಧರದಲ್ಲಿದ್ದಾಗ ನನ್ನ ಹಿರಿಯ ಅಧಿಕಾರಿಗಳು ಕೈಗಾ ಕಡೆಯಿಂದ ಅನಧಿಕೃತವಾಗಿ ವಾಹನದಲ್ಲಿ ಕಟ್ಟಿಗೆ ಕಳ್ಳ ಸಾಗಾಣಿಕೆಯಾಗುತ್ತಿದೆ ಎಂಬ ಬಾತ್ಮಿ ಮೇರೆಗೆ ನನಗೆ ಹೋಗಲು ನಿರ್ದೇಶನ ನೀಡಿದಂತೆ ನಾನು ಕೂಡಲೇ ಕಾರವಾರ ವಲಯ ಕಚೇರಿಗೆ ಬಂದಿರುತ್ತೇನೆ. ಅಲ್ಲಿ ಶಹರ ವನಾಪಾಲಕರಾದ ಶ್ರೀ. ಟಿ.ಜಿ.ನಾಯಕ್, ನೈತಿ ವನಪಾಲಕರಾದ ಯು.ಎಸ್.ತಳೇಕರ ಹಾಗೂ ದಿನಗೂಲಿ ನೌಕರರಾದ ಮೋಹನ ದುಗ್ಗಾ ಪಡ್ತಿ ಮತ್ತು ಆನಂದು ವಿಠ್ಠಲ ಗೋವೇಕರ ಹಾಗೂ ಇತರ ಅರಣ್ಯ ಸಿಬ್ಬಂದಿ ವರ್ಗದವರಿಂದ ಅರಣ್ಯ ಇಲಾಖಾ ವಾಹನದಲ್ಲಿ ರಾತ್ರಿ 11–00 ಗಂಟೆಗೆ ಕಾರವಾರದಿಂದ ಹೊರಟು ಕೈಗಾ ರಸ್ತೆ ಮುಖವಾಗಿ ಹೋದೆವು. ಸಿದ್ಧರದಲ್ಲಿ ಇಲಾಖಾ ವಾಹನವನ್ನು ಅರಣ್ಯ ವಸತಿ ಗೃಹದ ಬದಿಗೆ ನಿಲ್ಲಿಸಿ ನಾವು ರಸ್ತೆ ಪಕ್ಕದಲ್ಲಿ ಕಾಯುತ್ತಾ ಕುಳಿತೆವು. ಮಧ್ಯ ರಾತ್ರಿ ಸುಮಾರಿಗೆ ಕೈಗಾ ಕಡೆಯಿಂದ ಒಂದು ವಾಹನ ಬಂದಿದ್ದು, ನಾವು ಅಡ್ಡಗಟ್ಟಿ ವಾಹನವನ್ನು ನಿಲ್ಲಿಸಿದೆವು. ಬ್ಯಾಟರಿ ಬೆಳಕಿನಲ್ಲಿ ನೋಡಲಾಗಿ ವಾಹನದ ನಂ: ಕೆಎ–30/8579 ಆಗಿದ್ದು ಅದು ಟಾಟಾ ಎಸಿಇ ವಾಹನವಾಗಿದ್ದು ಅದರ ಚಾಲಕನನ್ನು ವಿಚಾರಿಸಲಾಗಿ ಆತ ತನ್ನ ಹೆಸರನ್ನು ಶ್ರೀ.ವಿನಾಯಕ ಆನಂದು ಗುನಗಿ, ಸಾ: ಕಿನ್ನರ ಎಂದು ಹೇಳಿರುತ್ತಾನೆ. ವಾಹನವನ್ನು ಪರಿಶೀಲಿಸಲಾಗಿ ಹಿಂಬದಿಯಲ್ಲಿ ಕಟ್ಟಿಗೆ ತುಂಡುಗಳನ್ನು ತುಂಬಲಾಗಿದ್ದು ಈ ಬಗ್ಗೆ ವಿಚಾರಿಸಲಾಗಿ ಚಾಲಕನು ಈ ಕಟ್ಟಿಗೆ ತುಂಡುಗಳ ಬಗ್ಗೆ ಯಾವುದೇ ಪಾಸ ಯಾ ಪರ್ಮಿಟ್ ಇಲ್ಲವಾಗಿ ಹೇಳಿದನು. ಅವು ಅನಧಿಕೃತವಾಗಿ ಸಾಗಾಟ ಮಾಡುತ್ತಿರುವುದು ನಮಗೆ ಖಾತರಿಯಾಗಿದ್ದರಿಂದ ಪಂಚರ ಸಮಕ್ಷಮ ನಾವು ಕಟ್ಟಿಗೆ ತುಂಡುಗಳನ್ನು ವಾಹನದಿಂದ ಕೆಳಗಿಳಿಸಿ ಪರಿಶೀಲಿಸಲಾಗಿ ಒಟ್ಟೂ 30=0.896 ಘಮೀ. ಅಳತೆಯ ಸಾಗವಾನಿ ತುಂಡುಗಳಿದ್ದವು. ನಾವು ಎಲ್ಲಾ ತುಂಡುಗಳಿಗೆ ನಂಬರ ಹಾಕಿ ಟಿ ಛಪ್ಪಾ ಹಾಕಿದೆವು. ಗಾಡಿಯನ್ನು ಪರಿಶೀಲಿಸಲಾಗಿ ಗಾಡಿಯ ಆರ್.ಸಿ. ಬುಕ್, ಇನ್ಸುರನ್ಸ ಪತ್ರಗಳು ಇದ್ದವು. ವಾಹನ ಕಾಗದಪತ್ರಗಳು ಹಾಗೂ ವಾಹನದ ಕೀಯನ್ನು ಮತ್ತು ಕಟ್ಟಿಗೆಯ ತುಂಡುಗಳನ್ನು ಪಂಚನಾಮೆ ಬರೆದು ಜಪ್ತಪಡಿಸಿಕೊಂಡೆವು. ವಾಹನದ ಬ್ಯಾಟರಿ ಸಹಾಯದಿಂದ ನಾವು ಪಂಚನಾಮೆ ಬರೆದಿದ್ದು, ಪಂಚನಾಮರೆ ಬರೆದಾಗ ಬೆಳಗಿನ ಜಾವ ಅಂದರೆ 1–8–2010 ರ 2–00 ಗಂಟೆಯಿಂದ 3–00 ಗಂಟೆಯಾಗಿತ್ತು. ಪಂಚನಾಮೆಯನ್ನು ಶ್ರೀ. ಯು.ಎಸ್.ತಳೇಕರ, ನೈತಿ ಶಾಖೆ, ಇವರು ಬರೆದಿರುತ್ತಾರೆ. ನಂತರ ಪುನ: ಕಟ್ಟಿಗೆಯ ತುಂಡುಗಳನ್ನು ಅದೇ ವಾಹನದ ಮೇಲೆ ಹೇರಿಕೊಂಡ ಕಾರವಾರ ವಲಯ ಕಚೇರಿಗೆ ಬಂದಿದ್ದೇವೆ.

ರಾತ್ರಿ ಸಮಯಯಾದ್ದರಿಂದ ಹಾಗೂ ಜನ ವಸತಿ ಇಲ್ಲದಿದ್ದರಿಂದ ಇಲಾಖೆಯ ದಿನಗೂಲಿ ನೌಕರರನ್ನು ಪಂಚರನ್ನಾಗಿ ಮಾಡಿ ಪಂಚನಾಮೆಗೆ ಸಹಿ ಪಡೆದಿರುತ್ತೇವೆ. ನಾನು ಇಲಾಖೆಯ ಪರವಾಗಿ ಪ್ರಕರಣ ದಾಖಲಿಸಿ ಪ್ರಥಮ ವರ್ತಮಾನ ವರಿದಯನ್ನು ದಾಖಲಿಸಿರುತ್ತೇನೆ. ಹಾಗೂ ಚಾಲಕ ವಿನಾಯಕ ಗುನಗಿ ಈತನ ಹೇಳಿಕೆಯನ್ನು ಪಡೆದುಕೊಂಡಿರುತ್ತೇನೆ. ಜಪ್ತು ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿರುತ್ತೇನೆ. ನಾವು ಜಪ್ತ ಪಡಿಸಿಕೊಂಡ ವಾಹನವು ಈಗ ಕಾರವಾರ ವಲಯ ಕಚೇರಿಯಲ್ಲಿದ್ದು ಅದರ ಛಾಯಾಚಿತ್ರವನ್ನು ನೋಡಿದ್ದಲ್ಲಿ ಗುರುತಿಸಿರುತ್ತೇನೆ. ಸಾಕ್ಷಿ ನೋಡಿ ಗುರುತಿಸಿದ ಪಂಚನಾಮೆಯನ್ನು, ನಿಶಾನಿ–ಪಿ1 ಎಂದು, ಸಾಕ್ಷಿಯ ಸಹಿಯನ್ನು 1ಎ ಎಂದು ಪ್ರಥಮ ವರ್ತಮಾನ ವರದಿಯನ್ನು ನಿಶಾನೆ ಪಿ2 ಎಂದು, ಸಾಕ್ಷಿಯ ಸಹಿಯನ್ನು ನಿಶಾನಿ ಪಿ2ಎ ಎಂದು, ಜಪ್ತ ವರದಿಯನ್ನು ನಿಶಾನಿ ಪಿ3, ಸಾಕ್ಷಿಯ ಸಹಿಯನ್ನು 3ಎ, ಆರೋಪಿತನ ಹೇಳಿಕೆಯನ್ನು ನಿಪಿ–4, ಸಾಕ್ಷಿಯ ಸಹಿಯನ್ನು 4ಎ, ವಿನಾಯಕ ಈತನ ಸಹಿಯನ್ನು 4ಬಿ ಎಂದು ಗುರುತಿಸಲಾಯಿತು. ವಾಹನದ ಫೋಟೋಗಳನ್ನು ನಿಪಿ–5 ಮತ್ತು 6 ಎಂದು ಗುರುತಿಸಲಾಯಿತು. ಸದರಿ ವಾಹನವನ್ನು ಅಕ್ರಮ ಕಳ್ಳ ಸಾಗಾಣಿಕೆಗೆ ಬಳಸಿಕೊಂಡಿದ್ದು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ನಾನು ಪ್ರಾರ್ಥಿಸುತ್ತೇನೆ.

**ಪಾಟೀ ಸವಾಲು :**

ಅರ್ಜಿದಾರರು ಹಾಗೂ ಅವರ ವಕೀಲರನ್ನು ಕರೆಯಲಾಗಿ ಅವರು ಹಾಜರಾಗಿದ್ದು ಇರುವದಿಲ್ಲ. ಕಾರಣ ಅರ್ಜಿದಾರರ ಪರ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

**ಪಿಡಬ್ಲು–2** ದಿನಾಂಕ: 31–7–2010 ರಂದು ನಾನು ಹಾಗೂ ಆನಂದು ವಿಠ್ಠಲ ಗೋವೆಕರ ಇವರು ಕಾರವಾರ ವಲಯ ಕಚೇರಿಯಲ್ಲಿದ್ದೆವು. ಆಗ ಅಲ್ಲಿ ಸಿದ್ಧರ ವನಪಾಲಕರಾದ ಎಸ್.ಬಿ. ಕಂತ್ರಿಕರ ಇವರು ಬಂದರು. ಹಾಗೂ ಕಟ್ಟಿಗೆಯು ಅಕ್ರಮ ಸಾಗಾಣಿಕೆಯಾಗುತ್ತಿದ್ದ ಬಗ್ಗೆ ಹಿರಿಯ ಅಧಿಕಾರಿಗಳಿಗೆ ಮಾಹಿತಿ ಇದ್ದು, ಅದನ್ನು ಪರಿಶೀಲಿಸಲು ಹೋಗಬೇಕೆಂದು ಹಾಗೂ ನಮ್ಮನ್ನು ಪಂಚರನ್ನಾಗಿ ಬರಬೇಕೆಂದು ಕೇಳಿಕೊಂಡರು. ಅದರಂತೆ ಕಾರವಾರ ವಲಯ ಕಚೇರಿಯಲ್ಲಿದ್ದ ಇತರ ಅರಣ್ಯ ಸಿಬ್ಬಂದಿಗಳು ನಾವು ಹಾಗೂ ಶ್ರೀ. ಎಸ್.ಬಿ. ಕಂತ್ರಿಕರ ಇವರೊಂದಿಗೆ ಇಲಾಖಾ ವಾಹನದಲ್ಲಿ ಸಿದ್ಧರಗೆ ಕೈಗಾ ರಸ್ತೆಯಲ್ಲಿ ಹೋದೆವು. ಅರಣ್ಯ ನಾಕಾದಲ್ಲಿ ನಮ್ಮ ವಾಹನವನ್ನು ನಿಲ್ಲಿಸಿ ರಸ್ತೆಯಲ್ಲಿ ಕಾಯುತ್ತಾ ನಿಂತೆವು. ದಿನಾಂಕ: 1.8.2010 ರ 1–30 ಗಂಟೆ ಮಧ್ಯರಾತ್ರಿ ಸುಮಾರಿಗೆ ಒಂದು ವಾಹನ ಬಂದಿದ್ದು ನಾವು ತಡೆದು ನಿಲ್ಲಿಸಿದೆವು. ವಾಹನ ಸಂಖ್ಯೆ ಕೆಎ–30/8579 ಆಗಿದ್ದು ಅದು ಟಾಟಾ ಎಸಿಇ ವಾಹನವಾಗಿದ್ದು ವಾಹನದಲ್ಲಿ ಚಾಲಕನಿದ್ದು. ಆತ ತನ್ನ ಹೆಸರನ್ನು ವಿನಾಯಕ ಗುನಗಿ ಎಂದು ಹೇಳಿರುತ್ತಾನೆ. ವಾಹನವನ್ನು ಬ್ಯಾಟರಿ ಹಾಗೂ ಡೈನಮೊದಿಂದ ಪರಿಶೀಲಿಸಿಲಾಗಿ ಅದರಲ್ಲಿ ಕಟ್ಟಿಗೆ ತುಂಡುಗಳಿದ್ದವು. ಅದರ ಬಗ್ಗೆ ಚಾಲಕನು ತನ್ನಲ್ಲಿ ಯಾವುದೇ ಪಾಸ ಯಾ ಪರ್ಮಿಟ್ ಇಲ್ಲವೆಂದು ಹೇಳಿದನು. ಎಲ್ಲಾ ತುಂಡುಗಳನ್ನು ಕೆಳಗೆ ಹಾಕಿ ನೋಡಲಾಗಿ ಅದರಲ್ಲಿ ಯಾವುದೇ ಸರ್ಕಾರಿ ಛಪ್ಪಾ ಇರಲಿಲ್ಲ. ಒಟ್ಟೂ 30 ಸಾಗ ಜಾತಿಯ ತುಂಡುಗಳಿದ್ದು, ಅವುಗಳನ್ನು ಅಳತೆ ಮಾಡಲಾಯಿತು. ಹಾಗೂ ಟಿ ಛಪ್ಪಾ ಹಾಕಲಾಯಿತು. ಈ ಬಗ್ಗೆ ಸ್ಥಳದಲ್ಲಿ ಪಂಚನಾಮಯನ್ನು ಬರೆಯಲಾಯಿತು. ಪಂಚನಾಮೆಗೆ ನಾನು ಸಹಿ ಮಾಡಿರುತ್ತೇನೆ. ಪಂಚನಾಮೆಯನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ಈಗಾಗಲೇ ನಿಶಾನಿ ಪಿ1 ಎಂದು ಗುರುತಿಸಿದ್ದು, ಸಾಕ್ಷಿಯ ಸಹಿಯನ್ನು 1ಬಿ ಎಂದು ಗುರುತಿಸಲಾಯಿತು. ವಾಹನದ ಛಾಯಾಚಿತ್ರಗಳನ್ನು ಸಾಕ್ಷಿ ನೋಡಿ ಗುರುತಿಸಿದ್ದು, ಅದನ್ನು ಈಗಾಗಲೇ ನಿಶಾನಿ ಬಿ 5 ಮತ್ತು 6 ಎಂದು ಗುರುತಿಸಲಾಯಿತು. ಪಂಚನಾಮೆಯಲ್ಲಿ ಜಪ್ತಪಡಿಸಿಕೊಂಡ ವಾಹನ ಹಾಗೂ ಕಟ್ಟಿಗೆ ತುಂಡುಗಳನ್ನು ಪುನ: ವಾಹನದಲ್ಲಿ ಹೇರಿ ಕಾರವಾರ ವಲಯ ಕಚೇರಿಗೆ ತರಲಾಯಿತು. ನನ್ನ ಸಂಗಡ ಪಂಚರಾಗಿ ಆನಂದು ವಿಠ್ಠಲ ಗೋವೆಕರ ಸಹಿ ಮಾಡಿರುತ್ತಾರೆ. ಪಂಚನಾಮೆ ವಿವರಗಳು ಸರಿ ಇರುತ್ತವೆ.

**ಪಾಟೀ ಸವಾಲು :**

ಅರ್ಜಿದಾರರ ಪರ ವಕೀಲರು ಹಾಜರಾಗಿದ್ದು ಪಾಟೀ ಸವಾಲು ಮಾಡಲು ಸಮಯಾವಕಾಶ ಕೋರಿದ ಕಾರಣ ಪಾಟೀ ಸವಾಲಿಗಾಗಿ ಮುಂದೂಡಲಾಯಿತು.

**ಪಿಡಬ್ಲು–3** ನಾನು 2012ನೇ ಸಾಲಿನಿಂದ ನಾವು ವಲಯ ಅರಣ್ಯಾಧಿಕಾರಿ, ಕಾರವಾರ ಎಂತಾ ಕೆಲಸ ಮಾಡುತ್ತಿದ್ದೇನೆ. ನಾನು ಕಾರವಾರ ವಲಯ ಅರಣ್ಯಾಧಿಕಾರಿಯಾಗಿ ಅಧಿಕಾರವನ್ನು ವಹಿಸಿಕೊಂಡ ನಂತರ ಈ ಪ್ರಕರಣದ ಮುಂದಿನ ತನಿಖೆಯನ್ನು ಮಾಡಿರುತ್ತೇನೆ. ಹಾಗೂ ಕಡತವನ್ನು ಪರಿಶೀಲಿಸಿ ಪ್ರಕರಣದ ಸಂಪೂರ್ಣ ಮಾಹಿತಿಯನ್ನು ಪಡೆದುಕೊಂಡಿರುತ್ತೇನೆ. ಜಪ್ತಪಡಿಸಿದ ವಾಹನ ಕೆಎ–30/8579 ನೇದರ ಬಗ್ಗೆ ಮಾನ್ಯ ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ರವರಲ್ಲಿ ವರದಿಯನ್ನು ವಾಹನದೊಂದಿಗೆ ಸಲ್ಲಿಸಿರುತ್ತೇನೆ. ವಾಹನವನ್ನು ನೋಡಿದ್ದಲ್ಲಿ ಗುರುತಿಸುತ್ತೇನೆ. ಸಾಕ್ಷಿ ವಾಹನದ ಫೊಟೊವನ್ನು ನೋಡಿ ಗುರುತಿಸಿದ್ದು ನಿಪಿ–5 ಮತ್ತು 6 ಎಂದು ಗುರುತಿಸುತ್ತೇನೆ. ನಂತರ ತನಿಖಾ ವರದಿಯನ್ನು ತಯಾರಿಸಿದ್ದೇನೆ. ಸಾಕ್ಷಿ ತನಿಖಾ ವರದಿಯನ್ನು ನೋಡಿ ಗುರುತಿಸಿದ್ದು ಅದನ್ನು ನಿ.ಪಿ–7 ಎಂದು ಸಾಕ್ಷಿ ಸಹಿಯನ್ನು ನಿ.ಪಿ–7ಎ ಎಂದು ಗುರುತಿಸಲಾಯಿತು. ಜಪ್ತಪಡಿಸಿಕೊಂಡ ವಾಹನವನ್ನು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಗೆ ಉಪಯೋಗಿಸಿಕೊಂಡಿದ್ದರಿಂದ ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿಕೊಳ್ಳುತ್ತೇನೆ.

**ಪಾಟೀ ಸವಾಲು :**

ಅರ್ಜಿದಾರರು ಹಾಗೂ ಅವರ ವಕೀಲರನ್ನು ಕರೆಯಲಾಗಿ ಅವರು ಹಾಜರಾಗಿದ್ದು ಇರುವದಿಲ್ಲ. ಕಾರಣ ಅರ್ಜಿದಾರರ ಪರ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

**ಅಂಶ ನಂ. (ಅ):**

ದಿನಾಂಕ: 31–07–2010 ರಂದು ರಾತ್ರಿ 11.00 ಘಂಟೆಗೆ ಶಾಖಾ ವನಪಾಲಕ ಸಿದ್ಧರ ರವರು ವಸತಿ ಗೃಹದಲ್ಲಿದ್ದಾಗ ಮೇಲಾಧಿಕಾರಿಗಳಿಂದ ಒಂದು ಗುನ್ಹೆಯ ಬಗ್ಗೆ ಬಾತ್ಮಿ ಬಂದ ಮೇರೆಗೆ ಶಾಖಾ ವನಪಾಲಕ ಸಿದ್ಧರ್, ಶಹರ ವನಪಾಲಕ, ಕಾರವಾರ, ನೈತಿ ವನಪಾಲಕ ಹಾಗೂ ದಿನಗೂಲಿ ಈರ್ವರು ದಿನಗೂಲಿ ನೌಕರರನ್ನು ಕೂಡಿಕೊಂಡು ಇಲಾಖಾ ವಾಹನ ಸಂಖ್ಯೆ: ಕೆಎ–30/ಜಿ–311 ರಲ್ಲಿ ಕಾರವಾರ–ಕೈಗಾ ರಸ್ತೆ ಮುಖವಾಗಿ ಹೊರಟು ಸಿದ್ಧರ ಕಡೆಗೆ ಹೋಗಿ ಇಲಾಖಾ ವಾಹನವನ್ನು ಸಿದ್ಧರ ಅರಣ್ಯ ವಸತಿ ಗೃಹದ ಪಕ್ಕದಲ್ಲಿ ಇಟ್ಟು ಗುನ್ಹೆಗಾಗಿ ಕಾಯುತ್ತಿರುವಾಗ ಸುಮಾರು ರಾತ್ರಿ. 1.30 ಘಂಟೆಗೆ ಕೈಗಾ ಕಡೆಯಿಂದ ಒಂದು ವಾಹನವು ಬರುತ್ತಿರುವದನ್ನು ಗಮನಿಸಿ ಅದನ್ನು ಕೈಸನ್ನೆ ಮಾಡಿ ಅಡ್ಡಗಟ್ಟಿ ನಿಲ್ಲಿಸಿದಂತೆ ವಾಹನ ಚಾಲಕನು ಗಾಡಿಯನ್ನು ರಸ್ತೆ ಪಕ್ಕಕ್ಕೆ ನಿಲ್ಲಿಸಿದಂತೆ ಬ್ಯಾಟರಿಯ ಬೆಳಕಿನಿಂದ ವಾಹನವನ್ನು ನೋಡಲಾಗಿ ಅದು ಕೆಎ–30/8579 ಟಾಟಾ ಟೆಂಪೋ ಮಾದರಿಯ ವಾಹನವೆಂದು ತಿಳಿದು ಬಂದಿತು. ನಂತರ ವಾಹನ ಚಾಲಕನ ಹೆಸರನ್ನು ಸಿಬ್ಬಂದಿಯವರು ವಿಚಾರಿಸಲಾಗಿ ಆತನು ವಿನಾಯಕ ಆನಂದು ಗುನಗಿ, ಸಾ:ಕಿನ್ನರ ಘಾಡಸೈ ಅಂತಾ ತಿಳಿಸಿದನು. ಮುಂದುವರೆದು ವಾಹನದ ಒಳಭಾಗದಲ್ಲಿ ಪರಿಶೀಲಿಸಲಾಗಿ ಅದರಲ್ಲಿ ಕಟ್ಟಿಗೆ ಇದ್ದು ಅವು ಸಾಗವಾನಿ ಕೊರೆದ ತುಂಡುಗಳು ಆಗಿದ್ದವು. ಸದರ ಕಟ್ಟಿಗೆಯ ಸಾಗಾಟ ಮಾಡಲು ಪಾಸ್/ಫರ್ಮಿಟ್ ಇದೆಯೋ ಎಂದು ವಿಚಾರಿಸಲಾಗಿ ತನ್ನಬಳಿ ಪಾಸ್/ಫರ್ಮಿಟ್ ಇಲ್ಲವೆಂದು ಅದನ್ನು ತಾನು ನಗೆಕೊವೆ ದೇವಸ್ಥಾನದ

ಹತ್ತಿರದಿಂದ ತುಂಬಿ ತಂದಿರುವ ಬಗ್ಗೆ ತಿಳಿಸಿದನು. ನಂತರ ಪಂಚರ ಸಮಕ್ಷಮ ವಾಹನದಲ್ಲಿದ್ದ ಎಲ್ಲಾ ಕಟ್ಟಿಗೆಯನ್ನು ಕೆಳಗೆ ಹಾಕಿ ಅದಕ್ಕೆ ನಂಬರ ಛಪ್ಪಾ ವಗೈರೆ ಇಲ್ಲದನ್ನು ನೋಡಿ ಇದನ್ನು ಅನಧಿಕೃತವಾಗಿಯೇ ತಂದಿದ್ದು ಎಂದು ಸಿಬ್ಬಂದಿಗಳು ಸಾಬೀತುಪಡಿಸಿಕೊಂಡು ನಂತರ ಬ್ಯಾಟರಿ ಹಾಗೂ ವಾಹನದ ಡೈನಮೋ ಬೆಳಕಿನಿಂದ ಕಟ್ಟಿಗೆ ಅಳತೆ ಮಾಡಲಾಗಿ ಅವು 30=0.896 ಘ.ಮೀ. ಇದ್ದವು. ನಂತರ ಎಲ್ಲಾ ಕಟ್ಟಿಗೆ ತುಂಡುಗಳಿಗೆ ಹಳದಿ ಖಡುವಿನಿಂದ ನಂಬರ ಹಾಕಿ ಟೀ. ನಿಶಾನೆ ಛಪ್ಪಾ ಹೊಡೆದು ಜಪ್ತಪಡಿಸಿಕೊಂಡರು. ನಂತರ ವಾಹನದ ಕಾಗದ ಪತ್ರಗಳಾದ ಆರ್.ಸಿ.ಪುಸ್ತಕ, ಇನ್ಶೂರೆನ್ಸ್ ಪ್ಯಾಡನ್ನು ಸಹ ತಮ್ಮ ವಶಪಡಿಸಿಕೊಂಡರು. ಜಪ್ತಪಡಿಸಿದ ವಾಹನವು ತಿಳಿ ಬಿಳಿಯದಾಗಿದ್ದು ಅದರಲ್ಲಿ ಕೆಂಪು ಬಣ್ಣದಿಂದ ಇಂಗ್ಲೀಷ್ ಅಕ್ಷರದಲ್ಲಿ ಸೀತಾರಾಮ ಅಂತ ಹಾಗೂ ಕನ್ನಡದಲ್ಲಿ ತಾಯಿಯ ಆಶೀರ್ವಾದ ಅಂತಾ ಬರೆದಿದ್ದು ಇರುತ್ತದೆ. ಜಪ್ತಪಡಿಸಿದ ವಾಹನವು TATA ACE ಆಗಿದ್ದು ಬ್ಯಾಟರಿ ಹಾಗೂ ವಾಹನದ ಹೆಡ್‌ಲೈಟ್ ಸಹಾಯದಿಂದ ಅದರ ಚಾಸಿಸ್ ನಂ. 445051 JRIV 50690 ಹಾಗೂ ಇಂಜಿನ್ ನಂ. 2751 105 JR2 552810 ಅಂತಾ ಇರುವದನ್ನು ನೋಡಿರುತ್ತೇವೆ. ರಂದು ರಾತ್ರಿ ವೇಳೆಯಲ್ಲಿ ಶಾಖಾ ವನಪಾಲಕ ಹಟ್ಟಿಕೇರಿ, ಅರಣ್ಯ ರಕ್ಷಕ ಹಟ್ಟಿಕೇರಿ ಮತ್ತು ಅರಣ್ಯ ವೀಕ್ಷಕ ಸದರ ಜಪ್ತ ಪಡಿಸಿದ TATA ACE ನೋಂದಣಿ ಸಂಖ್ಯೆ: 30/8579 ಮತ್ತು ಸಾಗ ನಗಗಳು 30=0.896 ಘ.ಮೀ. ಮುದ್ದೆ ಮ್ಹಾಲು ಇದನ್ನು ಅನಧಿಕೃತವಾಗಿ ಸಾಗಿಸುತ್ತಿರುವ ಬಗ್ಗೆ ದೃಢಪಟ್ಟಿಕೊಂಡು ಶಾಖಾ ವನಪಾಲಕ, ಸಿದ್ಧರ ಇವರು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24 (ಇ), 71ಎ, 80, 50, 99, 104 ಮತ್ತು ಕೆ.ಎಫ್.ಆರ್.169, 144 & 165 ಪ್ರಕಾರ ಪ್ರಥಮ ಮಾಹಿತಿ ವರದಿ ಸಂಖ್ಯೆ: 18/10–2011, ದಿನಾಂಕ: 01–08–2010 ರ ಪ್ರಕಾರ ಅರಣ್ಯ ಮೊಕದ್ದಮೆ ದಾಖಲಿಸಿಕೊಂಡಿದ್ದು ಇರುತ್ತದೆ. ಈ ಕುರಿತು ಪಂಚರ ಸಮಕ್ಷಮ ಪಂಚನಾಮೆಯನ್ನು ಶಾಖಾ ವನಪಾಲಕ, ನೈತಿ ಇವರು ಬ್ಯಾಟರಿ ಹಾಗೂ ಡೈನಮೊ ಬೆಳಕಿನಿಂದ ರಾತ್ರಿ 2.00 ಘಂಟೆಯಿಂದ ಪ್ರಾರಂಭಿಸಿ 3.00 ಘಂಟೆಗೆ ಬರೆದು ಮುಗಿಸಿದ್ದು ಇರುತ್ತದೆ. ನಂತರ ಜಪ್ತಪಡಿಸಿದ ವಾಹನ ಹಾಗೂ ಮುದ್ದೇಮ್ಹಾಲು ಸಮೇತ ಕಾರವಾರ ವಲಯ ಕಚೇರಿಗೆ ತೆಗೆದುಕೊಂಡು ಹೋಗಲು ತೀರ್ಮಾನಿಸಲಾಯಿತು. ಭದ್ರತೆಗೋಸ್ಕರ ವಲಯ ಅರಣ್ಯಾಧಿಕಾರಿಗಳ ಕಚೇರಿ ಆವರಣಕ್ಕೆ ತರಲಾಯಿತು. ಸದರ ವಾಹನವು ಅರಣ್ಯ ಗುನ್ನೆಯಲ್ಲಿ ಬಳಸಿದ ಬಗ್ಗೆ (ನಿ.ಪಿ– 1ರಿಂದ ನಿ.ಪಿ–6) ಹಾಜರುಪಡಿಸಲಾಗಿದೆ. ಇದೂ ಅಲ್ಲದೇ ಸರ್ಕಾರ ಪರ ಸಾಕ್ಷಿ ವಿಚಾರಣೆಯಲ್ಲಿ **ಪಿಡಬ್ಲು–1 ರಿಂದ ಪಿಡಬ್ಲು–2** ಇವರು ತಮ್ಮ ಸಾಕ್ಷದಲ್ಲಿ ನಿ.ಪಿ–1ನ್ನು ಸ್ಥಳದಲ್ಲಿ ಬರೆದು ಸಹಿ ಹಾಕಿದ ಬಗ್ಗೆ ತಮ್ಮ ಮುಖ್ಯ ವಿಚಾರಣೆಯಲ್ಲಿ ಹೇಳಿರುತ್ತಾರೆ. ಪ್ರಸ–1 ರವರು ತಮ್ಮ ಸಾಕ್ಷ್ಯದಲ್ಲಿ ಪಂಚನಾಮೆ ಕಾಲಕ್ಕೆ ರಾತ್ರಿ ಸಮಯವಾಗಿದ್ದು, ಸ್ವತಂತ್ರ ಸಾಕ್ಷಿದಾರರು ಸಿಗದೇ ಇದ್ದ ಬಗ್ಗೆ ಹೇಳಿದ್ದು, ಅದನ್ನು ಪರಿಗಣನೆಗೆ ತೆಗೆದುಕೊಂಡು ಪ್ರಸ–1 ಮತ್ತು 2 ಇವರ ಸಾಕ್ಷ್ಯದ ಆಧಾರದಲ್ಲಿ TATA ACE ವಾಹನ ನೋಂದಣಿ ಸಂಖ್ಯೆ: ಕೆಎ–30/8579 ನಲ್ಲಿ ಸಾಗ ನಗಗಳು 30=0.896 ಘ.ಮೀ. ಅರಣ್ಯ ಕಳ್ಳ ಸಾಗಾಣಿಕೆಯ ಅಪರಾಧದಲ್ಲಿ ಬಳಸಿಕೊಂಡಿದ್ದು ಖಚಿತಪಡಿಸುತ್ತದೆ.

**ಅಂಶ ನಂ. (ಈ):**

ಈ ಪ್ರಕರಣದಲ್ಲಿ ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರು ಈ ಪ್ರಕರಣದ ಗುನ್ನೆ ದಾಖಲಿಸಿದ ಹಾಗೂ ಸಾಕ್ಷಿಗಳ ವಿಚಾರಣೆಯಿಂದ ಹೇಳಿಕೆಯನ್ನು ದಾಖಲು ಮಾಡಿಕೊಳ್ಳಲಾಗಿದ್ದು, ಸದರ ಅರ್ಜಿದಾರನಾಗಲಿ ಅಥವಾ ಅವರ ಪರ ವಕಾಲತ್‌ವಹಿಸಿದ ನ್ಯಾಯವಾದಿಗಳಾಗಲಿ ತಮ್ಮ ಹೇಳಿಕೆಯನ್ನು ಸಮರ್ಥಿಸಬಹುದಾದಂತಹ ಯಾವುದೇ ದಾಖಲೆ/ಸಾಕ್ಷಿ ಪುರಾವೆಗಳನ್ನು ಒದಗಿಸುವಲ್ಲಿ ವಿಫಲರಾಗಿದ್ದಾರೆ. ಮುಂದುವರಿದು ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ವಾದ ಪುಷ್ಟೀಕರಿಸಲು ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು 2009 (I) Crime Page 25 ಇದನ್ನು ನೀಡಿರುತ್ತಾರೆ ಮತ್ತು ಸಹಾಯಕ ಅಭಿಯೋಗ ನಿರ್ದೇಶಕರು ಹಾಜರುಪಡಿಸಿದ ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು ನೋಡಲಾಗಿ ಯಾವುದೇ ವಾಹನವು ಅರಣ್ಯ ಉತ್ಪನ್ನಗಳ ಅನಧಿಕೃತ ಸಾಗಾಟ ಮಾಡಲು ಬಳಸಿದ್ದಲ್ಲಿ ಅದು Deforestation ಆಗಲು ಕಾರಣವಾಗುತ್ತದೆ ಎಂದು ಭಾವಿಸಬೇಕು ಹಾಗೂ ಇದು ನೈಸರ್ಗಿಕ ಅಸಮತೋಲನಕ್ಕೆ ಕಾರಣವಾಗುತ್ತದೆ. ಅರಣ್ಯ ಕಾಪಾಡುವದು ಇಲಾಖೆಯ ಕರ್ತವ್ಯವಾಗಿದ್ದು ಅನಧಿಕೃತವಾಗಿ ವಾಹನವನ್ನು ಮರಗಳ ಸಾಗಾಟಕ್ಕೆ ಬಳಸಿದರೆ ಬಹಿರಂಗ ಹರಾಜು ಮಾಡಬಹುದೆಂದು ಆದೇಶ ಮಾಡಿದ್ದು ಇರುತ್ತದೆ. ಆದ್ದರಿಂದ ಪರ ಹಾಗೂ ಅರ್ಜಿದಾರರ ಪರ ದಾಖಲೆಗಳನ್ನು, ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಲಾಗಿ, ವಾಹನ ನೋಂದಣಿ ಸಂಖ್ಯೆ: ಕೆಎ–30/8579 TATA ACE ವಾಹನ ಇದು ದಿನಾಂಕ: 31–07–2010 ರಂದು ಪ್ರಥಮ ಮಾಹಿತಿ ಸಂಖ್ಯೆ: 18/2010–11, ದಿನಾಂಕ: 31–07–2010 ರನ್ವಯ ದಾಖಲಾದ ಗುನ್ನೆಯಲ್ಲಿ ಅನಧಿಕೃತವಾಗಿ ಸಾಗ ನಗಗಳು 30=0.896 ಘ.ಮೀ. ಕಳ್ಳ ಸಾಗಾಣಿಕೆ ಮಾಡುವಲ್ಲಿ ತೊಡಗಿಸಿಕೊಂಡಿದ್ದು ದೃಢಪಟ್ಟಿರುವದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ)ರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬೇಕೆನ್ನುವ ಅಂಶವು ಮನದಟ್ಟಾಗಿದೆ.

ಆದ್ದರಿಂದ ಈ ಕೆಳಗಿನಂತೆ ಆದೇಶ:

**:ಆದೇಶ:**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ ಟಿ.ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಆದ ನಾನು ಈ ಮೂಲಕ ಆದೇಶಿಸುವದೇನೆಂದರೆ ಈ ಗುನ್ನೆ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963ರ ಅನುಚ್ಛೇದ 71 (ಎ) ಈ ತಾರೀಖಿನ ವರೆಗೆ ಆದ ತಿದ್ದುಪಡಿ ಪ್ರಕಾರ ವಾಹನ ನೋಂದಣಿ ಸಂಖ್ಯೆ: ಕೆಎ–30/8579 TATA ACE ಮತ್ತು ಅದರಲ್ಲಿದ್ದ ಸಾಗ ನಗಗಳು 30=0.896 ಘ.ಮೀ. ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

**ವಾಹನದ ವಿವರ:**

| | | | |
|---|---|---|---|
| 1) | ನೋಂದಣಿ ಸಂಖ್ಯೆ | : | KA-30/8579 |
| 2) | ಇಂಜಿನ್ ನಂಬರ | : | 275IDI05JRZ552816 |
| 3) | ಚಾಸಿ ನಂಬರ | : | 44505EJRZV50690 |
| 4) | ವಾಹನದ ಮಾದರಿ | : | TATA ACE ವಾಹನ (ನಾಲ್ಕು ಗಾಲಿ) |

ಈ ಆದೇಶವನ್ನು ಹೊರಡಿಸಿದ 30 ದಿನಗಳ ಅವಧಿಯಲ್ಲಿ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ಈ ಹೊತ್ತಿನ ದಿನಾಂಕ: 13–02–2015 ರಂದು ಈ ನ್ಯಾಯಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

(Certified Copy)

**ಟಿ.ಹೀರಾಲಾಲ್, ಭಾ.ಅ.ಸೇ.**
ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಕಾರವಾರ ವಿಭಾಗ, ಕಾರವಾರ.

**PR. 326**
**SC. 05**

## ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಸಂವಾ 185 ಕೆಎಂಯು 2014 ಬೆಂಗಳೂರು, ದಿನಾಂಕ:04-02-2015**

ಕರ್ನಾಟಕ ಸರ್ಕಾರವು ಪರಿವಿಡಿಯಲ್ಲಿ ವಿವರಿಸಿರುವ ಬೆಳಗಾವಿ ಜಿಲ್ಲೆಯ ಬೆಳಗಾವಿ ನಗರದ ಪುರಾತನ ಕೋಟೆಯನ್ನು "ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ನಿವೇಶನಗಳು ಮತ್ತು ಅವಶೇಷಗಳು ಅಧಿನಿಯಮ ೧೯೬೧ರ ಕಲಂ ೪(೩)ರ ಅಡಿ" ರಾಜ್ಯ (ಕರ್ನಾಟಕ ಆಕ್ಟ್ ಆಫ್ ೧೯೬೨) ರಾಜ್ಯ ಸಂರಕ್ಷಿತ ಸ್ಮಾರಕವನ್ನಾಗಿ ಘೋಷಿಸಲು ಅಭಿಪ್ರಾಯಪಟ್ಟು, ಅದರಂತೆ ದಿನಾಂಕ: ೩೦-೦೯-೨೦೧೪ರ ಅಧಿಸೂಚನೆ ಸಂಖ್ಯೆ: ಕಸಂವಾ ೧೮೫ ೨೦೧೪ ಹಾಗೂ ಇದೇ ಸಮ ಸಂಖ್ಯೆಯ ದಿನಾಂಕ: ೩೦-೦೯-೩೦೧೪ರ ಪರಿವಿಡಿಯಲ್ಲಿ ಕೆಲವೊಂದು ತಿದ್ದುಪಡಿ ಮಾಡಿ ದಿನಾಂಕ: ೧೩-೧೦-೨೦೧೪ರಂದು ತಿದ್ದುಪಡಿಯನ್ನು ಪ್ರಕಟಿಸಿ, ಅದರಿಂದ ಭಾದಿತರಾಗುವ ಎಲ್ಲಾ ವ್ಯಕ್ತಿಗಳಿಂದ ಆಕ್ಷೇಪಣೆಗಳನ್ನು ಆಹ್ವಾನಿಸಿ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿತ್ತು

ಈ ಬಗ್ಗೆ ಕೆಲವೊಂದು ಆಕ್ಷೇಪಣೆ/ಸಲಹೆಗಳು ಬಂದಿರುತ್ತವೆ. ಬಂದಿರುವ ಆಕ್ಷೇಪಣೆ/ಸಲಹೆಗಳನ್ನು ಸರ್ಕಾರವು ಪರಿಶೀಲಿಸಿದೆ. ಇದರಲ್ಲಿ ಪರಿಗಣನೆಗೆ ತೆಗದುಕೊಳ್ಳಬಹುದಾದ ಯಾವ ಅಂಶಗಳು ಇರುವುದಿಲ್ಲ. ಆದ್ದರಿಂದ ಬಂದಿರುವ ಆಕ್ಷೇಪಣೆಗಳನ್ನು ತಳ್ಳಿಹಾಕಿ ನಗರದ ಪುರಾತನ ಕೋಟೆಯನ್ನು ಸಂರಕ್ಷಿತ ಸ್ಮಾರಕವೆಂದು ಘೋಷಿಸುವ ಬಗ್ಗೆ ಇಲಾಖೆಯ ಅಧಿನಿಯಮ ಮತ್ತು ನಿಯಮಗಳು ಬಹಳ ವರ್ಷಗಳಿಂದ ಜಾರಿಯಲ್ಲಿದ್ದರೂ ಬೆಳಗಾವಿ ಕೋಟೆಯನ್ನು "ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ನಿವೇಶನಗಳು ಮತ್ತು ಅವಶೇಷಗಳು ಅಧಿನಿಯಮ 1961ರ ಕಲಂ 4(3)ರ ಅಡಿ" ರಾಜ್ಯ ಸಂರಕ್ಷಿತ ಸ್ಮಾರಕವೆಂದು ಘೋಷಿಸಲು ಇದುವರೆಗೂ ಕ್ರಮವಹಿಸದೇ ಇದ್ದರೂ ಸಹ ಇದೀಗ ಘೋಷಿಸಲು ಹೊರಟಿರುವುದು ಸ್ಮಾರಕದ ಸಂರಕ್ಷಣೆ, ಸಂವರ್ಧನೆ, ನಿರ್ವಹಣೆ ಮತ್ತು ಇಂತಹ ಪುರಾತನ ಸ್ಮಾರಕಗಳನ್ನು ಸಂರಕ್ಷಿಸುವುದು ಇಲಾಖೆಯ ಮತ್ತು ರಾಜ್ಯ ಸರ್ಕಾರದ ಆಧ್ಯ ಕರ್ತವ್ಯಗಳಲ್ಲಿ ಒಂದಾಗಿರುವುದರಿಂದ ಇವುಗಳನ್ನು ಮುಂದಿನ ಪೀಳಿಗೆಗೆ ರಕ್ಷಿಸುವುದು ಭಾರತದ ಸಂವಿಧಾನದ ಅನುಚ್ಛೇದ 51ರಡಿ ಎಲ್ಲರ ಹೊಣೆಯಾಗಿರುತ್ತದೆ ಮತ್ತು ಹಿಂದೆ ಈ ಬಗ್ಗೆ ಕ್ರಮ ವಹಿಸಿರಲಿಲ್ಲವೆಂದ ಮಾತ್ರಕ್ಕೆ ಅದನ್ನು ಈಗ ಮಾಡಲು ಅಡ್ಡಿಯಿರುವುದಿಲ್ಲ. ಹೀಗಾಗಿ ಅಂತಿಮ ಅಧಿಸೂಚನೆಯ ಅಗತ್ಯವಿದೆ. ರಾಜ್ಯದಲ್ಲಿರುವ ಪ್ರಮುಖ ಅರಕ್ಷಿತ ಸ್ಮಾರಕಗಳನ್ನು ದಾಖಲೀಕರಣದೊಂದಿಗೆ ರಾಜ್ಯ ಸಂರಕ್ಷಿತ ಸ್ಮಾರಕವೆಂದು ಹಂತ ಹಂತವಾಗಿ ಘೋಷಿಸಿರುವ ಬಗ್ಗೆ ಇಲಾಖೆಯ ಉದ್ದೇಶವಿದ್ದು, ಈ ಕ್ರಮವು ಸಕ್ಷಮ ಪ್ರಾಧಿಕಾರದ ಅಂತಿಮ ತೀರ್ಮಾನಕ್ಕೆ ಹಾಗೂ ಔಚಿತ್ಯಕ್ಕೆ ಒಳಪಟ್ಟಿರುತ್ತದೆ. ಇದರ ಹೊರತು ಯಾವುದೇ ಇಲಾಖೆಯ ಕಟ್ಟಡಗಳ ನಿರ್ಮಾಣಕ್ಕೆ ತೊಂದರೆಯಾಗುತ್ತದೆ ಎಂಬ ಒಂದೇ ಉದ್ದೇಶದ ಹಿನ್ನೆಲೆಯಲ್ಲಿ, ಸ್ಮಾರಕದ ಘೋಷಣೆಯನ್ನು ತಡೆಯುವುದು ಸೂಕ್ತವಲ್ಲವೆಂದು ಪರಿಗಣಿಸಿ "ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ಸ್ಥಳಗಳು ಮತ್ತು ಅವಶೇಷಗಳ ಅಧಿನಿಯಮ 1961ರ ಕಲಂ 4(3)ರ " ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಪರಿವಿಡಿಯಲ್ಲಿ ವಿವರಿಸಿರುವ ಬೆಳಗಾವಿ ಜಿಲ್ಲೆಯ ಬೆಳಗಾವಿ ನಗರದ ಪುರಾತನ ಕೋಟೆಯನ್ನು ರಾಜ್ಯ ಸಂರಕ್ಷಿತ ಸ್ಮಾರಕವೆಂದು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಮಂಜುನಾಥ ಪಾಟೀಲ್,**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ (ಆಡಳಿತ ಕನ್ನಡ)

### ಪರಿವಿಡಿ

**ಅಧಿಸೂಚನೆ ಸಂಖ್ಯೆ: ಕಸಂವಾ 185 ಕೆಎಂಯು 2014 ಬೆಂಗಳೂರು, ದಿನಾಂಕ: 04-02-2015**

| ಜಿಲ್ಲೆ | ತಾಲ್ಲೂಕು | ಇರುವ ಸ್ಥಳ | ಸ್ಮಾರಕ/ ಕಟ್ಟಡದ ಹೆಸರು | | | ಮೇರೆಗಳು (ಚಕ್ಕಬಂದಿ) | | ಒಡೆತನ | ಷರಾ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | | 8 | 9 |
| ಬೆಳಗಾವಿ | ಬೆಳಗಾವಿ | ಕ್ಯಾಂಟೋನ್‌ಮೆಂಟ್ ಬೆಳಗಾವಿ ನಗರ | ಬೆಳಗಾವಿ ಕೋಟೆ | ಸರ್ವೆ ನಂ.331 | 11.56 ಎಕರೆ | ಪೂರ್ವ : | ಸರ್ವೆ ನಂ.327 | ಸರ್ಕಾರ | ಪುರಾತನ ಕೋಟೆಯಾಗಿದೆ |
| | | | | ಸರ್ವೆ ನಂ.332 | 21.90 ಎಕರೆ | ಪಶ್ಚಿಮ : | ಸರ್ವೆ ನಂ. 324, 324/ಎ, 324/ಬಿ, 324/ಸಿ, 234/1, 315, 328/ಎ | | |
| | | | | | | ಉತ್ತರ : | ಸರ್ವೆ ನಂ. 324, 327, 326, ದುರ್ಗಾದೇವಿ ದೇವಾಲಯ, ಎಸ್.ಪಿ. ತೋರಟ್ ರಸ್ತೆ, ಕೋಟೆ ಉತ್ತರ ಗೇಟ್ | | |
| | | | | | | ದಕ್ಷಿಣ : | ಸರ್ವೆ ನಂ. 327, ಉತ್ತರದಿಂದ ಪ್ರಾರಂಭಗೊಂಡ ಪೂರ್ವಭಾಗ ದಾಟಿ ದಕ್ಷಿಣ ಭಾಗದವರೆಗೂ ಕೋಟೆಯು ವೃತ್ತಕಾರದಲ್ಲಿ ಸುತ್ತುವರೆದಿರುತ್ತದೆ. 327/1 ಭಾರತೇಶ್ ಎಜುಕೇಷನ್ ಟ್ರಸ್ಟ್ | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಮಂಜುನಾಥ ಪಾಟೀಲ್,**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ (ಆಡಳಿತ ಕನ್ನಡ)

PR-300
SC-50

## ಜಂಟಿ ನಿರ್ದೇಶಕರ ಕಛೇರಿ ಗಣಿ ಮತ್ತು ಭೂವಿಜ್ಞಾನ ಇಲಾಖೆ ನಂ 167, 11 ನೇ ಮೇನ್ ಸರಸ್ವತಿಪುರಂ ಮೈಸೂರು

**ಅಧಿಸೂಚನೆ**

**ಸಂಖ್ಯೆ: ಗಭೂಇ/ದವ/ಜಂನಿಮೈ/ಕಗಗು:ನಿ–8ಎ/2014–15, ದಿನಾಂಕ: 10.03.2015**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ–1994, ನಿಯಮ 8ಎ ಉಪನಿಯಮ (1) ರಂತೆ ಈ ಕೆಳಗೆ ನಮೂದಿಸಿರುವ ಕಟ್ಟಡ ಕಲ್ಲಿನ ಪ್ರದೇಶಗಳನ್ನು ಕಲ್ಲು ಗಣಿಗಾರಿಕೆ ಮಾಡುವ ಸಲುವಾಗಿ ಸಾರ್ವಜನಿಕ ಅವಗಾಹನೆಗಾಗಿ ಪ್ರಕಟಿಸಲಾಗಿದೆ.

ಉಪ ನಿರ್ದೇಶಕರು ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ಗ್ರಾಮಾಂತರ ದೂರವಾಣಿ ಸಂಖ್ಯೆ: 080–22866620 ಇವರಿಂದ ಕಲ್ಲು ಗಣಿ ಗುತ್ತಿಗೆಗಾಗಿ ಅರ್ಜಿಗಳನ್ನು ಸ್ವೀಕರಿಸಲಾಗುವುದು. ಪರಿಷ್ಕೃತ ನಿಯಮಾವಳಿಯಂತೆ ಅಧಿಕೃತವಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ 30 ದಿನಗಳ ನಂತರ ಸಾಮಾನ್ಯ ರಜಾ ದಿನ ಅಥವಾ ಸಾರ್ವತ್ರಿಕ ರಜಾ ದಿನವಾದರೆ, ಅರ್ಜಿಯನ್ನು ಮಾರನೇ ಕೆಲಸದ ದಿನದಂದು ಸ್ವೀಕರಿಸಲಾಗುವುದು.

ನಿಗದಿತ ಶುಲ್ಕ ಪಾವತಿ ಮಾಡಿ ನಿಗದಿತ ಅರ್ಜಿ ನಮೂನೆ ಮತ್ತು ಪ್ರದೇಶದ ನಕಾಶೆಯನ್ನು ಉಪ ನಿರ್ದೇಶಕರು ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ಗ್ರಾಮಾಂತರ ಇವರಿಂದ ಪಡೆಯಬಹುದಾಗಿರುತ್ತದೆ.

ಆಸಕ್ತಿ ಇರುವವರು ಅರ್ಜಿ ಸಲ್ಲಿಸುವ ಮೊದಲು ಪ್ರದೇಶದ ತಪಾಸಣೆ ಮಾಡಿ, ಖನಿಜ ಸಂಪತ್ತು ಲಭ್ಯತೆ ಇರುವ ಬಗ್ಗೆ ಮತ್ತು ಪ್ರದೇಶದ ಪ್ರಸಕ್ತ ಸ್ಥಿತಿ ಗತಿ ಬಗ್ಗೆ ಖಚಿತ ಪಡಿಸಿಕೊಳ್ಳತಕ್ಕದ್ದು. ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ 1994 ನಿಯಮ 8ಎ ರಂತೆ ಅರ್ಜಿಯನ್ನು ಸ್ವೀಕರಿಸಲಾಗುವುದು. ಕಲ್ಲು ಗಣಿ ಗುತ್ತಿಗೆ ಮಂಜೂರಾತಿಯು ಕಂದಾಯ ಮತ್ತು ಅರಣ್ಯ ಇಲಾಖೆಯ ನಿರಾಕ್ಷೇಪಣಾ ಪತ್ರದ ಷರತ್ತಿಗೆ ಒಳಪಟ್ಟಿರುತ್ತದೆ.

| ಕ್ರಸಂ | ಜಿಲ್ಲೆ | ತಾಲ್ಲೂಕು | ಖನಿಜ | ಗ್ರಾಮ | ಸರ್ವೆ ನಂ. | ವಿಸ್ತೀರ್ಣ (ಎಕರೆ–ಗುಂಟೆ) | ಹಳೇ ಕ.ಗ.ಗು. ಸಂಖ್ಯೆ | ಚೆಕ್ಕುಬಂದಿ |
|---|---|---|---|---|---|---|---|---|
| 1 | ಬೆಂಗಳೂರು ಗ್ರಾಮಾಂತರ | ದೇವನ ಹಳ್ಳಿ | ಕಟ್ಟಡ ಕಲ್ಲು | ಮುದ್ದ ನಾಯಕ್ಕನಹಳ್ಳಿ | 112 | 2–00 | 1837 | ಉ: ಸ.ನಂ. 112 ರ ಭಾಗ<br>ದ: ಸ.ನಂ. 112 ರ ಭಾಗ<br>ಪೂ: ಸ.ನಂ.112 ರ ಭಾಗ<br>ಪ: ಸ.ನಂ. 112 ರ ಭಾಗ |

ಜಂಟಿ ನಿರ್ದೇಶಕರು
ಗಣಿ ಮತ್ತು ಭೂವಿಜ್ಞಾನ ಇಲಾಖೆ
ದಕ್ಷಿಣ ವಲಯ ಮೈಸೂರು

**PR. 398**
**SC. 5**

## IN THE COURT OF HON'BLE 24 TH A.C.M.M NRUPATHUNGA ROAD, BENGALURU CITY

With reference to the above subject I hereby directed to publish the 82 [EIGHTY TWO] Unclaimed two Wheelers concerned to Vijayanagara Police Station in Karnataka Gazette. The Particulars of the vehicle are as follows.

| Sl.No | Vehicle Type | Vehicle Number | Chasis No. | Engine No. |
|---|---|---|---|---|
| 1 | TVS EX.L | NIL | MD621BD1141C48497 | D1C41108820 |
| 2 | HEROHONDA SPLENDER | KA-02 E-6172 | 02J20C06172 | 02J1819147632 |
| 3 | HERO HONDA SPLENDOR | KA-02 X-9761 | 99E19F02167 | 99E17F01959 |
| 4 | T.V.S.VICTOR | KA-01 Y-7473 | MD625AF1141L29279 | NIL |
| 5 | SUZUKI FIERO | KA-02 EE-6322 | M1202F122259 | 1202MMH123880 |
| 6 | T.V.S.APPACHI | KA-41. K-5378 | MD624HE33635821 | 0E3G62035500 |
| 7 | BAJAJ DISCOVERY | KA-02 EQ-7477 | 37946 | 38035 |
| 8 | TVS APPACHE | KA-41 K-5371(5378) | MD634KE4782A58191 | 0EAA82058264 |
| 9 | BAJAJ DISCOVERY | NIL | DSVBMH24204 | DSGBMH63240 |
| 10 | HERO HONDA SPLENDOR | NIL | 06M16F47256 | 06M15E47606 |
| 11 | HONDA ACTIVA | KA-41 H8192 | 68108232 | 8207063 |
| 12 | BAJAJ DISCOVERY | NIL | DZDSDSZZNCB63403 | DSGBMB8596 |
| 13 | HONDA ACTIVA | KA-05 EQ-54 | 78061412 | 5092971 |
| 14 | HONDA ACTIVA | KA-02 HC-5692 | 78593426 | 8772067 |
| 15 | TVS SCOOTY PEP | KA-06 Y-1638 | NIL | NIL |
| 16 | HERO HONDA SPLENDOR | KA-02 HC-7185 | MBLHA10EE89F10954 | 13284 |
| 17 | HONDA AVIATOR SCOOTER | KA-02 HC-9647 | ME4JF212F77009703 | JF2160033793 |

| | | | | |
|---|---|---|---|---|
| 18 | HONDA ACTIVA | KA-41 K-1258 | ME4JF083A88174884 | JF08E5200469 |
| 19 | HONDA ACTIVA | KA-02 HD-2656 | 21774 | 53153 |
| 20 | TVS VICTOR | KA-17 V-1810 | MD625AF134IL29252 | 0F1M129460 |
| 21 | BAJAJ PULSOR | KA-19 V-2786 | MD2DHDHZZNCL | DH07375223 |
| 22 | BAJAJ DISCOVERY | KA-05 HD-8732 | MD2DSDZZNGH02975 | DSBBN483140 |
| 23 | BAJAJ DISCOVERY | KA-05 EV-368 | DSUBLK01066 | DSGBLK01284 |
| 24 | HERO HONDA SPLENDOR | KA-05 ED-5024 (KA-02 EC-2118) | 00M20F00429 | 00M18E00392 |
| 25 | HONDA ACTIVA | KA-01 EF-1764 (KA-02 EJ-1332) | 38235416 | 1661 |
| 26 | HONDA ACTIVA | KA-02 EZ-7239 | 978760971 | 8939609 |
| 27 | HONDA ACTIVA | NIL | 667063 | ಉಜ್ಜಿದೆ |
| 28 | HONDA ACTIVA | KA-04 4908 | ME4JF052LG68435880 | JF08E8614741 |
| 29 | BAJAJ PULSOR | KA-03 EZ-585 | MD2DHDHZZNCM75536 | DHGBNM12922 |
| 30 | BAJAJ PULSOR | KA-03 HK-3429 | MD2DHDIZZSEHO3189 | DGEGBSH19438 |
| 31 | TVS VICTOR | KA-02 EQ-9037 | MD025AFIX10080 | 0FC51385257 |
| 32 | YAMAHA | KA-37 H-1879 | 96HIL5024661 | IL5024661 |
| 33 | YAMAHA | KA-02 ED-9433 | 014UU300433 | -- |
| 34 | HERO HONDA CBZ | KA-05 HP-5338 | MBLKC12ECBG005651 | KC25BBGD056760 |
| 35 | SUZUKI ACCESS | KA-41 U-1402 | MB8CFCABC8459149 | F486917165 |
| 36 | HONDA ACTIVA | KA-02 HP-4105 | ME4JC448JB7055854 | JC44E5057040 |
| 37 | BAJAJ DISCOVERY | KA-02 EW-5967 | MD2DSDSZZNCF03569 | DSGBNF82140 |
| 38 | SUZUKI ACCESS | KA-02 HJ-7026 | MB8CF4CALC8282595 | F4862187429 |
| 39 | HERO HONDA CD DELUX | KA-02 ES-7352 | 11370 | 18212 |
| 40 | HERO HONDA PASSION | KA-02 HK-5737 | 28113 | 54663 |
| 41 | YAMAHA CRUX | KA-05 ER-3051 | 011AKA329780 | BKA329780 |
| 42 | BAJAJ PULSOR | KA-05 EL-6523 | DHVBHHN98203 | 98256 |
| 43 | BAJAJ CT-100 | KA-02 CR-3439 | DUFBLL50501 | 0119 |
| 44 | BAJAJ CHETAK | KA-02 L-7878 | NIL | NIL |
| 45 | SUZUKI ACCESS | KA-04 V-1807 | 35057003252 | 350M010865 |
| 46 | AUTO RIKSHAW | KA-05 5248 | 96422 | 45824 |
| 47 | KENETIC HONDA | KA-05 Q-4685 | LF501116672 | 2L5437339 |
| 48 | AUTO RIKSHAW | KA-03 6260 | MD24424ZZNWG76155 | AEMBNJ99623 |
| 49 | AUTO RIKSHAW | KA-03 A-6740 | AAEBGK28300 | AAMBGK30525 |
| 50 | TATA SUMO | KA-02 D-4978 | H385TZ828323 | X254701103729 |
| 51 | HONDA ACTIVA | NIL | ME4JF085M48055663 | JF08ED673737 |
| 52 | HONDA ACTIVA | NIL | ME4JF08B38176157 | JF08E0182132 |
| 53 | BAJAJ PULSOR | KA-51 Z-7989 | MD2DHDHZZNCC74198 | DHGBNC11317 |
| 54 | HERO HONDA SPLENDOR | KA-02 EF-3890 | 23089 | 22322 |
| 55 | HERO HONDA SPLENDOR | NIL | 10683 | 23112 |
| 56 | AUTO RIKSHAW | KA-02 A-4697 | 24F96M49246 | 24M69M50595 |
| 57 | AUTO RIKSHAW | KA-03 A-2965 | Nil | 1732 |
| 58 | TVS VICTOR | KA-02 EH-4884 | N3303F462356 | N3303M464828 |
| 59 | YAMAHA RX | KA-02 EN-5684 | 02K41L640384 | 640384 |
| 60 | KENETIC HONDA | KA-02 H-8207 | NIL | NIL |
| 61 | HONDA DIO | KA-02 EV-6742 | 8157884 | 4151848 |
| 62 | HONDA DIO | KA-02 HD-6451 | F1120768015334 | 6022710 |

| | | | | |
|---|---|---|---|---|
| 63 | SUZUKI SAMURAI | KA-02 Y-1404 | 7905F320136 | 7905M369616 |
| 64 | TVS VICTOR | KA-02 EG-2709 | MD62AF1471C60448 | 0F1C71578168 |
| 65 | KAWASAKI | CRS-79 | 80063825 | 30E063371 |
| 66 | SUZUKI ACCESS | KA-04 V-1807 | MV8CFUCAC88205910 | 186205772 |
| 67 | TVS VICTOR | KA-02 ES-7388 | MDG25AF1X5211 | 0F1H51442902 |
| 68 | BAJAJ PULSOR | KA-03 HA-2709 | MD2DJCZZPCF-18546 | JCGBPF18385 |
| 69 | HERO HONDA SPLENDOR | KA-05 HD-7963 | 04J16C15682 | 04J15M14085 |
| 70 | HERO HONDA PASSION | KA-41 H-93 | 06F09C13193 | 06F008M35035 |
| 71 | TVS VICTOR | KA-02 EN-6399 | MD6225AF134ZK10305 | 0F1K41265938 |
| 72 | YAMAHA RX | NIL | ILI 1160508 | EL1116508 |
| 73 | YAMAHA RX | NIL | 034T45519 | 04T4551906 |
| 74 | HONDA UNICORN | KA-51 R-7515 | ME45C093F88007255 | KC09E1007270 |
| 75 | YAMAHA | KA-02 EE-4231 | ILI-199209 | ILI 1199208 |
| 76 | BAJAJ DISCOVERY | KA-02 HM-8223 | MD2DSJNZZPCE 89627 | JNBMTA27473 |
| 77 | BAJAJ PULSOR | KA-01 EL-2854 | MD2DHZZRCK65205 | DHJTRK-64693 |
| 78 | BAJAJ PULSOR | KA-21 R-6429 | MHVBLE 46658 | DHGELD 45829 |
| 79 | HERO HONDA GLAMOUR | KA-41 K-408 | MBLJA06ES9CH14810 | JA06EB9GH4988 |
| 80 | HONDA DIO | KA-41 R-4351 | NIL | JF11E 6099342 |
| 81 | HONDA ACTIVA | KA-02 HF-9363 | NIL | JC44E02392 |
| 82 | YAMAHA | KA-02 EQ-1234 | 04F5YY002957 | NIL |

**PR. 321**

**SC. 5**

24th Addl Chief Metropolitan Magistrate Bengaluru

## IN THE COURT OF 2ND ADDITIONAL CHIEF METROPOLITAN MEGISTRATE BENGALURU CITY

### Notification

### NO.01/2015 Dated: 25 /2 /2015

**It is here by notified for the information of the public that the unclaimed properties mentioned under are in the custody of the C.K.Achukattu Police Station, Bangalore City, as unclaimed shell be confiscated to the Government, and disposed off according to law of not claimed by the owner with proof of ownership within one months from the date of the publication of Notification.**

| SL NO. | VEHICLE NAME & NO | NCR NO & PF NO | ENG NO. | CH NO. |
|---|---|---|---|---|
| 1 | ಫಿಯೆಟ್ ಕಾರ್ DL-03-CY-0275 | C-MISS NO 303/09 PF NO.42/09 | 0047575 | MA41786008039666 |
| 2. | ಸ್ವರಾಜ್ ಮಜ್ದಾರ್ KA-05-D-8685 | C-MISS NO 356/09 PF NO.45/09 | - | - |
| 3. | MARUTHI SWIFT CAR KL-14-F-3009 | Cr.No.246/2010 U/s 379 IPC PF NO.184/10 | G13BBN247994 | MA3EYE41S00134094 |
| 4. | MARUTHI AULTO CAR GA-01-S-5191 | Cr.No.261/2010 U/s 379 IPC PF NO.15/2011 | F80N4110053 | MA3EY081S00659726 |
| 5. | MARUTHI SUZUKI A STAR CAR KA-05-MJ-47 | Cr.No.261/2010 U/s 379 IPC PF NO.15/2011 | K10BN1264648 | MA3EP0E180360271 |
| 6. | HUNDAI CAR KA-04-MH-4291 ( DUPLICATE NO) | Cr.No.261/2010 U/s 379 IPC PF NO.37/2011 | D4FA8H704897 | MALCM41VR8M048316 |
| 7. | SANTRO CAR GREY COLOUR KA05-HC-6831 & KA05-HC-6083 | CRI NO.181/2010 U/S 143,144,147,148, 448,302 R/W 149 IPC PF NO.65/2010 | - | - |

| SL NO. | VEHICLE NAME & NO | NCR NO & PF NO | ENG NO. | CH NO. |
|---|---|---|---|---|
| 1. | YAMAHA KA-09-EE-651 | NCR NO.328/14 PF NO.74/14 | 123CM334LS01 | 05A5YY207290 |
| 2. | HONDA DIO NO NUMBER | NCR NO.328/14 PF NO.74/14 | JF39E0048383 | - |
| 3. | SCOOTY KA-05-EN-8349 | NCR NO.328/14 PF NO.74/14 | K803GM879941 | - |
| 4. | BAJAJ DISCOVERY KA-01-EU-5693 | NCR NO.328/14 PF NO.74/14 | JZMBUE50229 | MD2DSJZZZUWE38767 |
| 5. | LIBRO KA-02-EG-9083 | NCR NO.329/14 PF NO.75/14 | 5KAL1105CM | 02M5TS006464 |
| 6. | HONDA ACTIVA KA-05-L-297 | NCR NO.329/14 PF NO.75/14 | JF08E0101938 | ME4JF085H28098416 |
| 7. | STAR CITY | NCR NO.329/14 PF NO.75/14 | - | MD625NF13A1B04223 |
| 8. | BAJAJ CT-100 KA-05-EP-8179 | NCR NO.381/14 PF NO.83/14 | - | DUFBLE71246 |
| 9. | HONDA DIO KA-05-HF-1719 | NCR NO.381/14 PF NO.83/14 | JF11E6081507 | ME4JF113C88010228 |
| 10. | KINETIC HONDA KA-01-J-2743 | NCR NO.381/14 PF NO.83/14 | - | - |
| 11. | BAJAJ CHETHAK CKJ-7848 | NCR NO.381/14 PF NO.83/14 | - | - |
| 12. | TVS XL SUPER KA-05-EN-7197 | NCR NO.396/14 PF NO.87/14 | P1306M780775 | P1306F788015 |
| 13. | SCOOTY PEP KA-03-EJ-3161 | NCR NO.396/14 PF NO.87/14 | 003G92895229 | - |
| 14. | TVS MAX-100 KA-05-K-1277 | NCR NO.396/14 PF NO.87/14 | - | MD623AB1541K90823 |
| 15. | TVS VICTOR KA-02-EH-1886 | NCR NO.396/14 PF NO.87/14 | N3302M404128 | N330F402279 |
| 16. | BAJAJ CD-100 KA-05-EV-6301 | NCR NO.415/14 PF NO.91/14 | - | DUCBL-J58265 |
| 17. | BAJAJ KAWASAKI KA-05-J-8707 | NCR NO.415/14 PF NO.91/14 | E30DL060322 | 030DI061547 |
| 18. | SUZUKI KA-02-S-6776 | NCR NO.415/14 PF NO.91/14 | 7610M752516 | 7610F707495 |
| 19. | YAMAHA KA-06-W-2447 | NCR NO.434/14 PF NO.92/14 | - | 04J544020640 |
| 20. | BAJAJ PLATINA KA-02-EX-1977 | NCR NO.434/14 PF NO.92/14 | - | MD2DDDZZZWWH3910 |
| 21. | BAJAJ PULSAR KA-02-EQ-9676 | NCR NO.434/14 PF NO.92/14 | DHGBLM91306 | - |
| 22. | AUTO KA-03-M-8303 COLOUR-YELLOW | NCR NO.323/14 PF NO.73/14 | - | - |
| 23. | AUTO KA-05-D-8990 COLOUR-YELLOW | NCR NO.323/14 PF NO.73/14 | - | MD2AA2422NWF61697 |

**PR. 387** IIND Addl Chief Metropolitan Magistrate Bengaluru

**IN THE COURT OF 9TH ADDITIONAL CHIEF METROPALITAN MAGISTRATE. BENGALURU CITY.**

It is hereby notified to the public that, the RMC Yard Police Station Bengaluru city have seized the following vehicles as unclaimed and such vehicles are lying in the police station as unclaimed so far. Hence the owners of the properties and vehecles may put their claim one month from the date of this publication.

**Bengaluru city**

**Dated: 27/02/2015**

**Magistrate court**

**Bengaluru city**

List of unclaimed vehicles are lying in RMC Yard police station, Bengaluru city.

| SL. NO. | Vehicle Type | Engine Number | Chassis Number |
|---|---|---|---|
| 1 | TVS SUZUKI MOTORCYCLE, KA-04-EC-9361 | 7205M324944 | 7205F269005 |
| 2 | TVS SUZUKI MOTORCYCLE, KA-04-Y-6715 | K01AM513883 | K01F521375 |
| 3 | HONDA MOTOR CYCLE, KA-03-EH-2139 | 0013146 | 5M28011818 |
| 4 | HONDA MOTOR CYCLE, KA-04-ED-7838 | JF081E0129345 | ME4JF08512812425 |
| 5 | HEROHONDA MOTORCYCLE, KA-03-EA-5007 | 00DD18M20867 | 00D20C22501 |
| 6 | KINETIC HONDA MOTOR CYCLE, KA-03-E-7491 | 173194 | 173887 |
| 7 | KINETIC HONDA MOTOR CYCLE, KA-03-7906 | N1FPE787289 | NIFPE793055 |
| 8 | KINETIC HONDA MOTOR CYCLE, KA-03-J-6889 | NIEHE353196 | NIFHE363298 |
| 9 | BAJAJ PULSAR MOTOR CYCLE, KA-50-E-5788 | DHGBNG25986 | MD2DHZNCG88026 |
| 10 | HERO HONDA MOTOR CYCLE, KA-01-H-0318 | NOT VISSIBLE CLEARLY | NOT VISSIBLE CLEARLY |
| 11 | KENETIC HONDA MOTOR CYCLE | NOEYE088422 | A1FYE013543 |

**Bengaluru city**

**Dated: 27/02/2015**

**PR. 367**

**SC. 10**

**Magistrate court**

**Bengaluru city**

## ಜಂಟಿ ನಿರ್ದೇಶಕರ ಕಛೇರಿ ಗಣಿ ಮತ್ತು ಭೂವಿಜ್ಞಾನ ಇಲಾಖೆ ನಂ 167, 11 ನೇ ಮೇನ್ ಸರಸ್ವತಿಪುರಂ ಮೈಸೂರು

## ಅಧಿಸೂಚನೆ

**ಸಂಖ್ಯೆ: ಗಭೂಇ/ದವ/ಜಂನಿಮೈ/ಕಗಗು:ನಿ–8ಎ/2014–15, ದಿನಾಂಕ: 09.03.2015**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ–1994, ನಿಯಮ 8ಎ ಉಪನಿಯಮ (1) ರಂತೆ ಈ ಕೆಳಗೆ ನಮೂದಿಸಿರುವ ಕಟ್ಟಡ ಕಲ್ಲಿನ ಪ್ರದೇಶಗಳನ್ನು ಕಲ್ಲು ಗಣಿಗಾರಿಕೆ ಮಾಡುವ ಸಲುವಾಗಿ ಸಾರ್ವಜನಿಕ ಅವಗಾಹನೆಗಾಗಿ ಪ್ರಕಟಿಸಲಾಗಿದೆ.

ಹಿರಿಯ ಭೂವಿಜ್ಞಾನಿ (ಖ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಿಕ್ಕಬಳ್ಳಾಪುರ ದೂರವಾಣಿ ಸಂಖ್ಯೆ: 08156–273325 ಇವರಿಂದ ಕಲ್ಲು ಗಣಿ ಗುತ್ತಿಗೆಗಾಗಿ ಅರ್ಜಿಗಳನ್ನು ಸ್ವೀಕರಿಸಲಾಗುವುದು. ಪರಿಷ್ಕೃತ ನಿಯಮಾವಳಿಯಂತೆ ಅಧಿಕೃತವಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ 30 ದಿನಗಳ ನಂತರ ಸಾಮಾನ್ಯ ರಜಾ ದಿನ ಅಥವಾ ಸಾರ್ವತ್ರಿಕ ರಜಾ ದಿನವಾದರೆ, ಅರ್ಜಿಯನ್ನು ಮಾರನೇ ಕೆಲಸದ ದಿನದಂದು ಸ್ವೀಕರಿಸಲಾಗುವುದು.

ನಿಗದಿತ ಶುಲ್ಕ ಪಾವತಿ ಮಾಡಿ ನಿಗದಿತ ಅರ್ಜಿ ನಮೂನೆ ಮತ್ತು ಪ್ರದೇಶದ ನಕಾಶೆಯನ್ನು ಹಿರಿಯ ಭೂವಿಜ್ಞಾನಿ (ಖ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಿಕ್ಕಬಳ್ಳಾಪುರ ಇವರಿಂದ ಪಡೆಯಬಹುದಾಗಿರುತ್ತದೆ.

ಆಸಕ್ತಿ ಇರುವವರು ಅರ್ಜಿ ಸಲ್ಲಿಸುವ ಮೊದಲು ಪ್ರದೇಶದ ತಪಾಸಣೆ ಮಾಡಿ, ಖನಿಜ ಸಂಪತ್ತು ಲಭ್ಯತೆ ಇರುವ ಬಗ್ಗೆ ಮತ್ತು ಪ್ರದೇಶದ ಪ್ರಸಕ್ತ ಸ್ಥಿತಿ ಗತಿ ಬಗ್ಗೆ ಖಚಿತ ಪಡಿಸಿಕೊಳ್ಳತಕ್ಕದ್ದು. ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ 1994 ನಿಯಮ 8ಎ ರಂತೆ ಅರ್ಜಿಯನ್ನು ಸ್ವೀಕರಿಸಲಾಗುವುದು. ಕಲ್ಲು ಗಣಿ ಗುತ್ತಿಗೆ ಮಂಜೂರಾತಿಯು ಕಂದಾಯ ಮತ್ತು ಅರಣ್ಯ ಇಲಾಖೆಯ ನಿರಾಕ್ಷೇಪಣಾ ಪತ್ರದ ಷರತ್ತಿಗೆ ಒಳಪಟ್ಟಿರುತ್ತದೆ.

| ಕ್ರ ಸಂ | ಜಿಲ್ಲೆ | ತಾಲ್ಲೂಕು | ಖನಿಜ | ಗ್ರಾಮ | ಸರ್ವೆ ನಂ. | ವಿಸ್ತೀರ್ಣ ಎಕೆರೆ/ಗುಂಟೆ | ಹಳೇ ಕ.ಗ.ಗು. ಸಂಖ್ಯೆ | ಚೆಕ್ಕುಬಂದಿ |
|---|---|---|---|---|---|---|---|---|
| 1 | ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | ಕಟ್ಟಡ ಕಲ್ಲು | ರೆಡ್ಡಿಗೊಲ್ಲವಾರಹಳ್ಳಿ | 22 | 1–10 | 443 | ಉ:ಸ.ನಂ.22ರ ಭಾಗ<br>ದ: ಸ.ನಂ.22 ರ ಭಾಗ<br>ಪೂ: ಸ.ನಂ.22 ರ ಭಾಗ<br>ಪ::ಸ.ನಂ.22 ರ ಭಾಗ |
| 2 | ಚಿಕ್ಕಬಳ್ಳಾಪುರ | ಗುಡಿಬಂಡೆ | ಕಟ್ಟಡ ಕಲ್ಲು | ಲಕ್ಷ್ಮೀ ಸಾಗರ | 22 | 7–36 | 456 | ಉ: ಶಿಂಗಾನಹಳ್ಳಿಗ್ರಾಮ<br>ದ: ಸ.ನಂ. 22ರ ಭಾಗ<br>ಪೂ: ಸ.ನಂ 22 ರ ಭಾಗ<br>ಪ: ಸ.ನಂ. 22 ರ ಭಾಗ |

**PR. 397**

**SC. 5**

ಜಂಟಿ ನಿರ್ದೇಶಕರು

ಗಣಿ ಮತ್ತು ಭೂವಿಜ್ಞಾನ ಇಲಾಖೆ ದಕ್ಷಿಣ ವಲಯ ಮೈಸೂರು

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ, ಸಾಗರ.

**ಅಧಿಸೂಚನೆ ಸಂಖ್ಯೆ:ಬಿ3:ಅಮೊ.ವಾಹನ:ಪ್ರಕಟಣೆ:ವಿವ:53/14–15, ದಿನಾಂಕ: 07– 03–2015.**

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ವಿವರ ಕೆಳಕಂಡಂತಿರುತ್ತದೆ.

| ಕ್ರಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 1 | ಮಾರುತಿ ಓಮಿನಿ– ಕೆಎ–14–ಎಂ–748. | ಆನಂದಪುರಂ ವಲಯದ ಅ.ಮೊ. ಸಂಖ್ಯೆ : 49/14–15, ದಿ:17–11–2014 | NEF7403 | ST91IN901971 |
| 2 | ಮಾರುತಿ ಓಮಿನಿ– ಜಿಎ–01–ಜೆ–0149 | ಅಂಬ್ಲಿಗೊಳ ವಲಯದ ಅ.ಮೊ. ಸಂಖ್ಯೆ 41/14–15, ದಿ: 19–11–2014 | Not visible | IN232534 |
| 3 | ಕವಾಸಾಕಿ ಬೈಕ್ ಕೆಎ–15–ಹೆಚ್–6971 | ಆನಂದಪುರಂ ವಲಯದ ಅ.ಮೊ. ಸಂಖ್ಯೆ : 09/14–15, ದಿ:27–05–2014 | Not visible | BFFBHL-38700 |
| 4 | ಆಶೋಕ ಲೈಲ್ಯಾಂಡ್ ಲೈಟ್ ವೆಹಿಕಲ್ ಕೆಎ–18–ಬಿ–2936 | ಆನಂದಪುರಂ ವಲಯದ ಅ.ಮೊ. ಸಂಖ್ಯೆ : 76/14–15, ದಿ: 06–03–2015 | BDH013696P | MBIAA22E6DRB36555 |
| 5 | ಟಾಟಾ ಇಂಡಿಕಾ ಕೆಎ–04–ಬಿ–3844 | ಆನಂದಪುರಂ ವಲಯದ ಅ.ಮೊ. ಸಂಖ್ಯೆ : 76/14–15, ದಿ:06–03–2015 | 279001153804 | 600137HVZPA35366 |
| 6 | ಹಿರೋ ಹೊಂಡಾ ಬೈಕ್ ಸಿಡಿ–100 ಕೆಎ–17–ಜೆ–7367 | ಸೊರಬ ವಲಯದ ಅ.ಮೊ. ಸಂಖ್ಯೆ: 77/14–15, ದಿ: 23–01–2015 | Not visible | Not visible |
| 7 | ಹಿರೋ ಹೊಂಡಾ ಡ್ರೀಮ್ ಬೈಕ್ ಕೆಎ–15–ಎಸ್–4092 | ಶಿಕಾರಿಪುರ ವಲಯದ ಅ.ಮೊ. ಸಂಖ್ಯೆ: 19/14–15, ದಿ: 09–02–2015 | Not visible | ME4JE583MC8160463 |
| 8 | ಟಾಟಾ ಏಸ್ ಕೆಎ–14–ಬಿ–3179 | ಆನಂದಪುರಂ ವಲಯದ ಅ.ಮೊ. ಸಂಖ್ಯೆ : 71/14–15, ದಿ:16–02–2015 | 2757DI06JWYSH9766 | MAT44505D2167660 |
| 9 | ಡಿಸ್ಕವರಿ ಬೈಕ್ ಕೆಎ–15–ಜಿ–8806 | ಆನಂದಪುರಂ ವಲಯದ ಅ.ಮೊ. ಸಂಖ್ಯೆ : 71/14–15, ದಿ:16–02–2015 | 105139H4 | MD2A15BIZSEWL08533 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳಸಹಿದಾರರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಲು ಸೂಚಿಸಿದೆ. ಈ ಮೇಲಿನ ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಣೆ ಮಾಡಲು ಉಪಯೋಗಿಸಿದಕ್ಕಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೇಕೆ ? ಎಂಬುದರ ಬಗ್ಗೆ ಲಿಖಿತ ಸಮಜಾಯಿಷಿಯನ್ನು ಇತರೆ ಮೂಲ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ತಿಳಿಸಲಾಗಿದೆ. ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ)ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

PR. 373
SC. 25

**ಪೋಲೀಸ್ ಕಮೀಷನರ್‌ರವರ ಕಛೇರಿ, ಬೆಂಗಳೂರು ನಗರ,**

**ಸಂಖ್ಯೆ:119/ಅಪರ ಸಿಪಿ(ಸಂಚಾರ)/2014, ದಿನಾಂಕ:31-01-2015.**

**॥ ಮಾರ್ಪಾಡು ಅಧಿಸೂಚನೆ ॥**

ಈ ಕಛೇರಿಯ ಅಧಿಸೂಚನೆ ಇದೇ ಸಮ ಸಂಖ್ಯೆ ದಿನಾಂಕ:16-12-2014ರಲ್ಲಿ ಬೆಂಗಳೂರು ನಗರ ವ್ಯಾಪ್ತಿಯ ಗಡಿ ಪ್ರದೇಶದ ಒಳಗೆ ಸರಕು ಸಾಗಣಿ ವಾಹನಗಳು ಅಂದರೆ ಮೂರು ಟನ್‌ಗಿಂತಲೂ ಹೆಚ್ಚು ಭಾರ ಹೊರುವ ವಾಹನಗಳ ಪ್ರವೇಶವನ್ನು ಬೆಳಗ್ಗೆ 6-00 ಗಂಟೆಯಿಂದ ರಾತ್ರಿ 10-00 ಗಂಟೆಯವರೆಗೆ ನಿರ್ಬಂಧಿಸಿ ಆದೇಶ ಹೊರಡಿಸಲಾಗಿತ್ತು. ಸಂಚಾರ ಪೋಲೀಸರು ಈ ಅಧಿಸೂಚನೆಯನ್ನು ದಿನಾಂಕ:01-01-2015ರಿಂದ ಕಾರ್ಯರೂಪಕ್ಕೆ ತಂದಿದ್ದರು. ಆ ಸಮಯದಲ್ಲಿ ಲಾರಿ ಮಾಲೀಕರ ಸಂಘಟನೆಗಳ ಪದಾಧಿಕಾರಿಗಳು ಮತ್ತು ವಾಣಿಜ್ಯೋದ್ಯಮಿಗಳು ಈ ಕಛೇರಿಗೆ ಹಲವು ವಿವಿಧ ಮನವಿಗಳನ್ನು ಸಲ್ಲಿಸಿ ಮೇಲ್ಕಂಡ ಅವಧಿಯಲ್ಲಿ ಸರಕು ಸಾಗಣೆ ವಾಹನಗಳಿಗೆ ನಿರ್ಬಂಧ ವಿಧಿಸಿರುವುದರಿಂದ ಸಾರ್ವಜನಿಕರಿಗೆ, ಲಾರಿ ಮಾಲೀಕರಿಗೆ, ಚಾಲಕರಿಗೆ ಹಾಗೂ ವಾಣಿಜ್ಯೋದ್ಯಮಿಗಳಿಗೆ ಆಗುತ್ತಿರುವ ಸಮಸ್ಯೆ ಮತ್ತು ತೊಂದರೆಗಳನ್ನು ಈ ಕೆಳಕಂಡಂತೆ ವ್ಯಕ್ತಪಡಿಸಿ ಅಧಿಸೂಚನೆಯನ್ನು ಹಿಂಪಡೆಯುವಂತೆ ಕೋರಿರುತ್ತಾರೆ.

1) ರಾತ್ರಿ ವೇಳೆಯಲ್ಲಿ ಕಾರ್ಮಿಕರು ಸಿಗುವುದು ಕಷ್ಟ.
2) ರಾತ್ರಿ ವೇಳೆಯ ಕಾರ್ಯಾಚರಣೆಗೆ ಭದ್ರತೆ ಅವಶ್ಯಕತೆ ಇರುತ್ತದೆ.
3) ಅನೇಕ ಸಗಟು ವ್ಯಾಪಾರ ಮಾರುಕಟ್ಟೆಗಳು ನಗರದ ಒಳಭಾಗದಲ್ಲೇ ಇರುತ್ತದೆ.
4) ನಗರದ ಹೊರಗೆ ಟ್ರಕ್ ಟರ್ಮಿನಲ್‌ಗಳು ಮತ್ತು ಇತರೆ ಮೂಲಭೂತ ಸೌಲಭ್ಯದ ಅಭಾವ ಇರುತ್ತದೆ.
5) ಸರ್ಕಾರಿ ಸ್ವಾಮ್ಯದ ಸಂಸ್ಥೆಗಳಿಗೆ ಸಂಬಂಧಪಟ್ಟ ಸರಕು ಸಾಗಣೆಗಳ ಕೆಲವು ಕಾರ್ಯಾಚರಣೆಗಳು ಹಗಲು ಸಮಯದಲ್ಲಿ ಕಡ್ಡಾಯವಾಗಿ ಕೈಗೊಳ್ಳಬೇಕಾಗಿರುತ್ತದೆ.

ಮೇಲ್ಕಂಡ ಸಮಸ್ಯೆಗಳನ್ನು ತಿಳಿಸಿ ನೀಡಲಾಗಿದ್ದ ಮನವಿಗಳನ್ನು ಆಧರಿಸಿ ದಿನಾಂಕ:14-01-2015ರಂದು ಲಾರಿ ಮಾಲೀಕರ ಸಂಘಗಳ ಪದಾಧಿಕಾರಿಗಳು ಮತ್ತು ಇತರೆ ವಾಣಿಜ್ಯ ಉದ್ಯಮಿಗಳೊಂದಿಗೆ ಸಭೆಯನ್ನು ನಡೆಸಲಾಯಿತು. ಈ ಸಭೆಯಲ್ಲಿ ಬೆಂಗಳೂರು ನಗರದಲ್ಲಿ ನಾನ್ ಪೀಕ್ ಹವರ್ಸ್ ವೇಳೆಯಲ್ಲಿ ಅಂದರೆ ಬೆಳಿಗ್ಗೆ 11-00 ಗಂಟೆಯಿಂದ ಸಂಜೆ 04-00 ಗಂಟೆಯವರೆಗೆ ಹಾಗೂ ರಾತ್ರಿ 10-00 ಗಂಟೆಯಿಂದ ಬೆಳಿಗ್ಗೆ 07-00ಗಂಟೆಯವರೆಗೆ ಸಂಚರಿಸಲು ಅನುಮತಿ ನೀಡುವಂತೆ ಹಾಜರಿದ್ದ ಲಾರಿ ಮಾಲೀಕರ ಸಂಘಗಳ ಪದಾಧಿಕಾರಿಗಳು ಮತ್ತು ಇತರೆ ವಾಣಿಜ್ಯ ಉದ್ಯಮಿಗಳು ಕೋರಿದ್ದರು.

ಕ್ರಮೇಣ, ಇದೇ ಸಂಬಂಧ ಸಂಚಾರ ವಿಭಾಗದ ಸಂಬಂಧಪಟ್ಟ ಪೊಲೀಸ್ ಅಧಿಕಾರಿಗಳಿಂದಲೂ ಸಹ ಚರ್ಚಿಸಿ ಕೆಳಕಂಡಂತೆ ತೀರ್ಮಾನಕ್ಕೆ ಬರಲಾಯಿತು.

ಆದ್ದರಿಂದ ಕಲಂ 115 ಮೋಟಾರ್ ವಾಹನ ಅಧಿನಿಯಮ, 1988 ಸಹವಾಚನ ನಿಯಮ 221-ಎ(5) ಕ.ಮೋ.ವಾ. ನಿಯಮಾವಳಿಗಳು, 1989 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎಂ.ಎನ್.ರೆಡ್ಡಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಬೆಂಗಳೂರು ನಗರದಲ್ಲಿ ಈ ಹಿಂದೆ ಅಧಿಸೂಚನೆ ಸಮ ಸಂಖ್ಯೆ. 119/ಅಪರ ಸಿಪಿ(ಸಂಚಾರ)/2014 ದಿನಾಂಕ:16-12-2014ರಲ್ಲಿ ಭಾರೀ ಸರಕು ಸಾಗಣೆ ವಾಹನಗಳ ನಿರ್ಬಂಧಿಸಿರುವ ಅಧಿಸೂಚನೆಗಳನ್ನು ಮಾರ್ಪಡಿಸಿ, ಬೆಂಗಳೂರು ನಗರದ ಪೊಲೀಸ್ ಆಯುಕ್ತರ ಸರಹದ್ದಿಗೆ ಒಳಪಡುವ ಎಲ್ಲಾ ರಸ್ತೆಗಳಲ್ಲಿಯೂ ಏಳೂವರೆ ಟನ್‌ಗಿಂತಲೂ ಹೆಚ್ಚು ಭಾರ ಹೊರುವ ಸರಕು ಸಾಗಣೆ ವಾಹನಗಳು ಬೆಳಿಗ್ಗೆ 11-00 ಗಂಟೆಯಿಂದ ಸಂಜೆ 04-00 ಗಂಟೆಯವರೆಗೆ ಹಾಗೂ ರಾತ್ರಿ 10-00 ಗಂಟೆಯಿಂದ ಬೆಳಿಗ್ಗೆ 07-00ಗಂಟೆಯವರೆಗೆ ಸಂಚರಿಸುವಂತೆ ಹಾಗೂ ಬೆಳ್ಳಿಗ್ಗೆ 07-00 ಗಂಟೆಯಿಂದ 11-00 ಗಂಟೆಯವರೆಗೆ ಹಾಗೂ ಸಂಜೆ 04-00 ಗಂಟೆಯಿಂದ ರಾತ್ರಿ 10-00 ಗಂಟೆಯವರೆಗೆ ಪೊಲೀಸ್ ಆಯುಕ್ತರ ಸರಹದ್ದಿಗೆ ಒಳಪಡುವ ಎಲ್ಲಾ ರಸ್ತೆಗಳಲ್ಲಿಯೂ ಏಳೂವರೆ ಟನ್‌ಗಿಂತಲೂ ಹೆಚ್ಚು ಭಾರ ಹೊರುವ ಸರಕು ಸಾಗಣೆ ವಾಹನಗಳ ಪ್ರವೇಶವನ್ನು ನಿರ್ಬಂಧಿಸಿ ಆದೇಶಿಸಿರುತ್ತೇನೆ.

ವಿಧಾನ ಸೌಧದ 2 ಕಿ.ಮಿ. ಆವೃತ್ತದಲ್ಲಿ ಎಲ್ಲಾ ರೀತಿಯ ಮೂರು ಟನ್‌ಗಿಂತಲೂ ಹೆಚ್ಚು ಭಾರ ಹೊರುವ ಸರಕು ಸಾಗಣೆ ವಾಹನಗಳ ಸಂಚಾರವನ್ನು 24 ಗಂಟೆಗಳ ಕಾಲ ನಿಷೇಧಿಸಲಾಗಿದೆ.

ಅಂತೆಯೇ ಕಲಂ 116 ಮೊಟಾರು ವಾಹನ ಅಧಿನಿಯಮ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ:31-01-2015 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ:31-01-2015 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಂ.ಎನ್.ರೆಡ್ಡಿ**
ಪೊಲೀಸ್ ಆಯುಕ್ತರು,
ಬೆಂಗಳೂರು ನಗರ.

**PR. 322**
**SC. 100**

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



## ಕರ್ನಾಟಕ ಲೋಕಸೇವಾ ಆಯೋಗ.

**ವಿಷಯ:** ಆಯೋಗವು ನಡೆಸಿದ 2014ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಲ್ಲಿ ಪರೀಕ್ಷಾ ದುರಾಚಾರ ಪ್ರಕರಣದಲ್ಲಿ ಭಾಗಿಯಾದ ಒಬ್ಬ ಅಭ್ಯರ್ಥಿಗೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:–**
1. ಶ್ರೀ ಚಂದ್ರಯ್ಯ ಎಂ.(ನೋಂ.ಸಂ.152127), ಇವರಿಗೆ ಜಾರಿ ಮಾಡಿದ ಆಯೋಗದ ಕಾರಣ ಕೇಳುವ ನೋಟೀಸ್ ಸಂಖ್ಯೆ:ಇ.ಪ.(3)424/2014–15/ಪಿಎಸ್‌ಸಿ, ದಿ:08–01–2015,
2. ಸದರಿ ಅಭ್ಯರ್ಥಿಯು ಸಲ್ಲಿಸಿರುವ ಲಿಖಿತ ಸಮಜಾಯಿಷಿ ದಿ:13–01–2015,
3. ದಿನಾಂಕ:27–01–2015ರ ಆಯೋಗದ ಸಭಾ ನಡವಳಿಗಳು.

**ಪ್ರಸ್ತಾವನೆ:–**

ಆಯೋಗವು ನಡೆಸಿದ 2014ನೇ ಸಾಲಿನ ದ್ವಿತೀಯ ಅಧಿವೇಶನ ಇಲಾಖಾ ಪರೀಕ್ಷೆಗಳಲ್ಲಿ ದಿನಾಂಕ:20–12–2014ರಂದು ಅಪರಾಹ್ನ ಜರುಗಿದ ರೆವಿನ್ಯೂ ಹೈಯರ್ ಭಾಗ–2 ಪತ್ರಿಕೆ–2ರ ವಿಷಯದ ಇಲಾಖಾ ಪರೀಕ್ಷೆಯು ನಡೆಯುತ್ತಿದ್ದ ಸಮಯ 02:45ಕ್ಕೆ ಇಲಾಖಾ ಪರೀಕ್ಷೆಯ ಉಪ ಮುಖ್ಯ ಮೇಲ್ವಿಚಾರಕರು ಪರೀಕ್ಷಾ ಉಪ ಕೇಂದ್ರವಾದ ಬಿ.ಬಿ.ಎಂ.ಪಿ, ಬಾಲಕಿಯರ ಸಂಯುಕ್ತ ಪದವಿ ಪೂರ್ವ ಕಾಲೇಜು, ಸಂಗಮ್ ವೃತ್ತ, ಪಾದರಾಯನಪುರ, ಬೆಂಗಳೂರು–26. ಇಲ್ಲಿಗೆ ಭೇಟಿ ನೀಡಿದಾಗ ನೋಂದಣಿ ಸಂಖ್ಯೆ.152127ರ ಅಭ್ಯರ್ಥಿ ಶ್ರೀ ಚಂದ್ರಯ್ಯ ಎಂ, ಇವರು ಆಯೋಗವು ಅಭ್ಯರ್ಥಿಗಳಿಗೆ ನೀಡಿರುವ ಸೂಚನೆಗಳಿಗೆ ವಿರುದ್ಧವಾಗಿ ತಮ್ಮ ಬಳಿ ಮೊಬೈಲ್ ಇಟ್ಟುಕೊಂಡು ಪರೀಕ್ಷಾ ದುರಾಚಾರವೆಸಗಿರುತ್ತಾರೆಂದು ಉಪ ಮುಖ್ಯ ಮೇಲ್ವಿಚಾರಕರು ಮತ್ತು ಪರೀಕ್ಷಾ ಕೇಂದ್ರದ ಮೇಲ್ವಿಚಾರಕರು ದಿನಾಂಕ:20–12–2014ರಂದು ವರದಿಯನ್ನು ನೀಡಿರುತ್ತಾರೆ.

ಮೇಲಿನ ವರದಿಯ ಮೇರೆಗೆ ಉಲ್ಲೇಖ–(1)ರಲ್ಲಿ ಓದಲಾದ ದಿ:08–01–2015ರ ಕಾರಣ ಕೇಳುವ ನೋಟೀಸ್‌ನ್ನು ಜಾರಿ ಮಾಡಿ ಆಪಾದಿತ ಅಭ್ಯರ್ಥಿಯಿಂದ ಲಿಖಿತ ಸಮಜಾಯಿಷಿಯನ್ನು ಕೇಳಲಾಗಿತ್ತು. ಸದರಿ ನೋಟೀಸಿಗೆ ಆಪಾದಿತ ಅಭ್ಯರ್ಥಿಯು ಸಲ್ಲಿಸಿರುವ ಉಲ್ಲೇಖ–(2)ರಲ್ಲಿ ಓದಲಾದ ದಿನಾಂಕ: 13–01–2015ರ ಲಿಖಿತ ಸಮಜಾಯಿಷಿಯನ್ನು ಆಯೋಗದಲ್ಲಿ ಸ್ವೀಕರಿಸಲಾಗಿರುತ್ತದೆ. ಪರೀಕ್ಷಾ ದುರಾಚಾರ ಪ್ರಕರಣದ ಸಂಬಂಧ ಅಭ್ಯರ್ಥಿಯು ತನ್ನ ಮೇಲಿರುವ ಪರೀಕ್ಷಾ ಕೊಠಡಿಯಲ್ಲಿ ಮೊಬೈಲ್ ಹೊಂದಿರುವ ಆರೋಪವನ್ನು ಒಪ್ಪಿಕೊಂಡಿರುವ ಹಿನ್ನಲೆಯಲ್ಲಿ ಸದರಿ ಪ್ರಕರಣದ ಬಗ್ಗೆ ತೀರ್ಮಾನ ತೆಗೆದುಕೊಳ್ಳುವ ಸಲುವಾಗಿ ಸಭಾ ಟಿಪ್ಪಣಿಯನ್ನು ಆಯೋಗದ ಸಭೆಯ ಮುಂದೆ ಮಂಡಿಸಲಾಗಿ ಆಯೋಗವು ಸದರಿ ಅಭ್ಯರ್ಥಿಗೆ ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನಪತ್ರ ಸಂಖ್ಯೆ:ಆಡಳಿತ.398/93–94/ಪಿಎಸ್‌ಸಿ, ದಿನಾಂಕ:14–07–1993 ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಅಭ್ಯರ್ಥಿ ಶ್ರೀ ಚಂದ್ರಯ್ಯ ಎಂ.(ನೋಂ.ಸಂ.152127), ಇವರ ಪ್ರಸಕ್ತ 2014ನೇ ಸಾಲಿನ ದ್ವಿತೀಯ ಅಧಿವೇಶನದ ಅಭ್ಯರ್ಥಿತ್ವವನ್ನು ರದ್ದುಪಡಿಸುವ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ಉಲ್ಲೇಖ(3)ರಲ್ಲಿನ ದಿನಾಂಕ:27–01–2015ರ ಆಯೋಗದ ಸಭೆಯಲ್ಲಿ ನಿರ್ಣಯಿಸಿರುವ ಹಿನ್ನೆಲೆಯಲ್ಲಿ ಈ ಮುಂದಿನ ಆದೇಶ.

**ಆದೇಶ ಸಂಖ್ಯೆ:ಇಪ(3) 525 /2014–15/ಪಿಎಸ್‌ಸಿ, ಬೆಂಗಳೂರು, ದಿನಾಂಕ: 11–02–2015.**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನಪತ್ರ ಸಂಖ್ಯೆ. ಆಡಳಿತ.398/93–94/ಪಿಎಸ್‌ಸಿ ದಿನಾಂಕ:14–07–1993ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಚಂದ್ರಯ್ಯ ಎಂ,(ನೋಂ.ಸಂ.152127), ಪ್ರಥಮ ದರ್ಜೆ ಸಹಾಯಕರು, ಸಹಾಯಕ ಹಣಕಾಸು ನಿಯಂತ್ರಣಾಧಿಕಾರಿರವರ ಕಚೇರಿ, ಬಿ.ಬಿ.ಎಂ.ಪಿ, ದಾಸರಹಳ್ಳಿ ವಿಭಾಗ, ಎಂ.ಇ.ಐ. ಲೇಔಟ್, ಬೆಂಗಳೂರು –560073. ಇವರ ಪ್ರಸಕ್ತ 2014ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸುವ ದಂಡನೆಯನ್ನು ವಿಧಿಸಿದೆ.

**ಮನೋಜ್ ಕುಮಾರ್ ಮೀನಾ**
ಕಾರ್ಯದರ್ಶಿ
ಕರ್ನಾಟಕ ಲೋಕಸೇವಾ ಆಯೋಗ.

**PR. 354**
**SC. 25**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59